ಪ್ರೀತಿ ಪಾತ್ರರಾದ
ಶ್ರೀ. ಪಂ|| ಶಿವಕುಮಾರ್ ಜೀಯವರಿಗೆ

ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆಯ ಸ್ತೋತ್ರ ಪುಷ್ಪ ____

# ಭಕ್ತಾಮರಪಾರ್ಶ್ವನಾಥ ಸ್ತೋತ್ರಮ್

## ಮತ್ತು ಇತರ ಕೆಲವು ಸ್ತೋತ್ರಗಳ ಸಂಗ್ರಹ




ಸ್ತೋತ್ರಕಾರರು :

**ಆಸ್ಥಾನ ವಿದ್ವಾನ್ ಪಂ। ಶಿಶುಪಾಲ ಪಾರ್ಶ್ವನಾಥ ಶಾಸ್ತ್ರೀ,**

ಮೂಡುಬಿದಿರೆ.



ಪ್ರಕಾಶಕರು :

**ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ,**

ಶ್ರೀ ಜೈನಮಠ, ಹೊಂಬುಜ (ಶಿವಮೊಗ್ಗ)

## ಮುನ್ನುಡಿ

ಮಾನವನ ಆತ್ಮೋನ್ನತಿಯು ಶಾಸ್ತ್ರಶ್ರವಣ ಮತ್ತು ಮನನದಿಂದ ಸಾಧ್ಯ. ಆದರೆ ಇದು ಸಾಮಾನ್ಯರಿಗೆ ಕಷ್ಟವಾದುದರಿಂದ ಸ್ತೋತ್ರ-ಸಾಹಿತ್ಯದ ರಚನೆಯಾಯಿತು. ಈ ಸ್ತೋತ್ರ ಸಾಹಿತ್ಯವನ್ನು ಅರ್ಥತಿಳಿದು ಭಕ್ತಿಯಿಂದ ಪಠಿಸುವ ಭಕ್ತಜನರ ಮನಸ್ಸು "ಪರಮಾತ್ಮ" ಹಾಗೂ ತನ್ಮೂಲಕ ಸ್ವಾತ್ಮ-ಸ್ವರೂಪದಲ್ಲಿ ನೆಲೆನಿಲ್ಲಲು ಸುಲಭ ಸಾಧ್ಯವೆಂದರಿತು ಇತರ ಆಗಮಗಳಲ್ಲಿರುವಂತೆ "ಜೈನಾಗಮ"ದಲ್ಲೂ ಅಮೋಘ ಹಾಗೂ ಪ್ರಾಚೀನವಾದ ಅನೇಕ ಸ್ತೋತ್ರ-ಗ್ರಂಥಗಳನ್ನು ಪೂರ್ವಾಚಾರ್ಯರು ರಚಿಸಿ ಕೃತಾರ್ಥರಾಗಿದ್ದಾರೆ. "ಸ್ವಯಂಭೂಸ್ತೋತ್ರ" ರಚಿಸಿದ ಸ್ವಾಮಿ ಸಮಂತಭದ್ರರು "ಚಂದ್ರಪ್ರಭ" ತೀರ್ಥಂಕರರ "ಚಂದ್ರಪ್ರಭಂ ಚಂದ್ರಮರೀಚಿಗೌರಂ" ಎಂಬ ಸುಂದರ ಸ್ತೋತ್ರವನ್ನು ಭಕ್ತಿಭಾವದಿಂದ ಪಠಿಸಿದಾಗ "ಶಿವಲಿಂಗ" ಒಡೆದು ಆ ಸ್ಥಳದಲ್ಲಿ ಚಂದಿರನಂತೆ ಸೌಮ್ಯವಾಗಿ ಬೆಳಗುವ ಶ್ರೀಚಂದ್ರಜಿನೇಂದ್ರರ ಮೂರ್ತಿಯು ಉದ್ಭವಿಸಿತೆಂಬ ಪ್ರತೀತಿ ಇದೆ. ಇದೇ ರೀತಿ ಭಕ್ತಾಗ್ರೇಸರ ಶ್ರೀ ಮಾನತುಂಗಾಚಾರ್ಯರ "ಭಕ್ತಾಮರ" ಸ್ತೋತ್ರವು ನವರಸಭರಿತವಾಗಿ ಸುಪ್ರಸಿದ್ಧವಾಗಿದೆ. ಈ ಸ್ತೋತ್ರದ ಪಠನದಿಂದ ಆಚಾರ್ಯರನ್ನು ಬಂಧಿಸಿದ್ದ ಸರಪಣಿಯ ಕೊಂಡಿಗಳು ಕಡಿದವೆಂಬುದೂ ಸುಪ್ರಸಿದ್ಧವೇ ಆಗಿದೆ. ಇದನ್ನರಿತು ನನ್ನ ಹಿರಿಯ ಮಿತ್ರರಾದ ಶ್ರೀ ಪಂ। ಶಿಶುಪಾಲ-ಪಾರ್ಶ್ವನಾಥ ಶಾಸ್ತ್ರಿಗಳವರು ಸಂಸ್ಕೃತ, ಸಾಹಿತ್ಯ-ಶಿರೋಮಣಿ" ಮೊದಲಾದ ಅನೇಕ ಪದವಿಗಳನ್ನು ಪಡೆದವರಾಗಿದ್ದು ಹಿಂದೆ ಮೈಸೂರು ಅರಮನೆಯ "ಆಸ್ಥಾನ ವಿದ್ವಾಂಸ"ರಾಗಿ ರಾಜಮಾನ್ಯತೆ ಪಡೆದಿದ್ದಾರೆ. ಇವರ ಸಂಸ್ಕೃತ ಸಾಹಿತ್ಯ ಸೇವೆಯನ್ನು ಗಮನಿಸಿ ಕರ್ನಾಟಕ ಸರಕಾರವು ಇವರಿಗೆ "ರಾಜ್ಯಪ್ರಶಸ್ತಿ" ನೀಡಿ ಗೌರವಿಸಿದೆ. ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿನ ಜೈನಾ

ಗಮ ವಿಭಾಗದ ಪ್ರೊಫೆಸರ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀ ಶಾಸ್ತ್ರಿಗಳು ಭಕ್ತರ ಉಪಯೋಗ ಹಾಗೂ ಆತ್ಮೋದ್ಧಾರಕ್ಕಾಗಿ "ಭಕ್ತಾಮರ - ಪಾರ್ಶ್ವನಾಥ" ವೆಂಬ ಸ್ತೋತ್ರಗ್ರಂಥವನ್ನು "ವಸಂತ ತಿಲಕ" ವೃತ್ತದಲ್ಲಿ ಕನ್ನಡ ಭಾವಾರ್ಥದೊಂದಿಗೆ ರಚಿಸಿರುತ್ತಾರೆ. ಈ ಸ್ತೋತ್ರವನ್ನು ನಾನು ಆಮೂಲಾಗ್ರವಾಗಿ ಓದಿ ನೋಡಿದಾಗ, ಈ ಸ್ತೋತ್ರಗುಚ್ಛವು ಲಲಿತ ಪದ ಸಮೂಹದಿಂದ ಸನ್ನಿವೇಶಕ್ಕೆ ಸರಿದೂಗುವ ರೀತಿಯಲ್ಲಿ ರಸಾಲಂಕಾರಭರಿತವಾಗಿ ರಚಿಸಲ್ಪಟ್ಟು, ವಿದ್ವತ್ಪೂರ್ಣ ಶೈಲಿಯಲ್ಲಿ ಹಿಂದಿನ ಜೈನಾಚಾರ್ಯರಿಂದ ರಚಿಸಲ್ಪಟ್ಟ, ವಿಪುಲವಾದ ಸ್ತೋತ್ರ-ಸಾಹಿತ್ಯಗಳಂತೆ ಅವುಗಳಲ್ಲೊಂದಾಗಿ ಪರಿಗಣಿಸುವಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಶ್ರೀ ಶಾಸ್ತ್ರಿಗಳು ಸದಾ ಮನನಶೀಲರಾಗಿ ಸರಸ್ವತೀ ಸೇವೆಯಲ್ಲಿ ನಿರತರಾಗಿರುತ್ತಾರೆ. ಕಷ್ಟಸಾಧ್ಯವಾದ ಇಂತಹ ಪ್ರಶಂಸನೀಯ ಕೃತಿಗಳನ್ನು ರಚಿಸುತ್ತಿರುವ ಈ ವಿದ್ವಾಂಸರು ನಿಜವಾಗಿಯೂ ವಿದ್ವಜ್ಜನರ ಗೌರವಕ್ಕೆ ಪಾತ್ರರಾಗಿದ್ದಾರೆ. ಶ್ರೀ ಪಾರ್ಶ್ವನಾಥ ಸ್ವಾಮಿಯ ಜೀವನ ವೃತ್ತದ ಸ್ಥೂಲ ರೂಪ-ರೇಖೆಗಳು ಅಲ್ಲಲ್ಲಿ ಅಂಕಿತಗೊಂಡಿರುವುದು ಈ ಸ್ತೋತ್ರದ ವೈಶಿಷ್ಟ್ಯವಾಗಿದೆ. ಶ್ರೀಯುತರು ಇತೋಪ್ಯತಿಶಯವಾಗಿ ಇಂತಹ ಅಮೂಲ್ಯ ಸ್ತೋತ್ರರತ್ನಗಳನ್ನು ರಚಿಸಿ, ಭಗವತ್ಕೃಪೆಗೂ, ಸರಸ್ವತೀ ಪ್ರಸನ್ನತೆಗೂ ಪಾತ್ರರಾಗಿ ಅಮರಕೀರ್ತಿ ಪಡೆಯಲೆಂದು ಹಾರ್ದಿಕವಾಗಿ ಹಾರೈಸುತ್ತೇನೆ.

ಇತಿ,

**ಕೆ. ಸೀತಾರಾಮ ಸೋಮಯಾಜಿ,**
"ಅದ್ವೈತ ವೇದಾಲಂಕಾರ" ಧರ್ಮಶಾಸ್ತ್ರ ವಿದ್ವಾನ್,
"ಶೈವಾಗಮ - ವಿಶಾರದ"
ನಿವೃತ್ತ ಪ್ರೊಫೆಸರ್ ಮಹಾರಾಜಸಂಸ್ಕೃತಕಾಲೇಜ್, ಮೈಸೂರು.



## ನನ್ನ ವಕ್ತವ್ಯ

ಅತಿಶಯಕ್ಷೇತ ಶ್ರೀ ಹೊಂಬುಜಮಠದ ಸ್ವರ್ಗೀಯ ಶ್ರೀಗಳವರ ಬಹುದಿನಗಳ ಕನಸಾಗಿದ್ದು ಇಂದು ವರ್ತಮಾನ ಶ್ರೀಗಳವರ ಸತ್ಪ್ರೇರಣೆಯಿಂದ ನನ್ನ ಸಂಸ್ಕೃತ ಸ್ತೋತ್ರಗ್ರಂಥದ ರಚನೆಯ ಶ್ರಮವು ಸಾರ್ಥಕವಾಗಿದೆ. ಆದ್ದರಿಂದ ಇದು ಅವರಿಗೇ ಸಮರ್ಪಿತ. ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆಯ ಪುಷ್ಪವಾಗಿ ಅರಳಿರುವ ಈ ಕಿರುಹೊತ್ತಿಗೆಯಲ್ಲಿರಬಹುದಾದ ಗುಣಗಳನ್ನು ಸಹೃದಯಿಗಳಾದ ಭಕ್ತಪಾಠಕರು ಪರಿಗ್ರಹಿಸಿ ನಿತ್ಯಪಠನದಿಂದ ಭಗವಾನ್ ಶ್ರೀ ಪಾರ್ಶ್ವನಾಥ ಸ್ವಾಮಿ ಹಾಗೂ ಮಹಾಮಾತೆ ಪದ್ಮಾಂಬಿಕೆಯ ಕೃಪೆಗೆ ಪಾತ್ರರಾಗುವರೆಂದು ನಂಬುತ್ತೇನೆ.

ಇಂತು ತಮ್ಮ ವಿನೀತ ಸ್ತೋತ್ರಕಾರ,

**ಪಂ। ಶಿಶುಪಾಲ ಪಾರ್ಶ್ವನಾಥ ಶಾಸ್ತ್ರೀ,** ಮೂಡಬಿದಿರೆ.



# ಭಕ್ತಾಮರ - ಪಾರ್ಶ್ವನಾಥ ಸ್ತೋತ್ರಮ್

ಭಕ್ತಾಮರ ಪ್ರಣತ ಪಾದಪಯೋಜಯುಗ್ಮಂ ।
ಪಾರ್ಶ್ವೇಶ್ವರಂ ವಿಜಿತದುರ್ಜಯಕರ್ಮಶತ್ರುಂ ॥
ಸ್ತೋತುಂ ಮಹಂತಮವಿಚಾರ್ಯ ಮದೀಯಶಕ್ತಿಂ ।
ಸಂಕಲ್ಪಿತೋಽಸ್ಮಿ ಪರಿಹಾಸಮುಪೈಮಿ ನೂನಂ ॥ ೧ ॥

ದೇವೇಂದ್ರಾದಿ ದೇವತೆಗಳಿಂದ ವಂದಿಸಲ್ಪಡುವ ಚರಣಕಮಲಗಳುಳ್ಳ ಜಯಿಸಲು ಕಷ್ಟ ಸಾಧ್ಯವೆನಿಸಿದ ಕರ್ಮರೂಪಿ ಶತ್ರುಗಳನ್ನು ಗೆದ್ದಿರುವ, ಅನಂತ ಶಕ್ತಿಯುಳ್ಳ ಶ್ರೀ ಪಾರ್ಶ್ವಜಿನೇಂದ್ರರನ್ನು ನನ್ನ ಅಲ್ಪ ಶಕ್ತಿಯ ಅರಿವಿಲ್ಲದೆ ಸ್ತುತಿಸಲು ಉದ್ಯುಕ್ತನಾಗಿದ್ದೇನೆ ಆದರೆ ವಿದ್ವಾಂಸರ ಅಪಹಾಸ್ಯಕ್ಕೆ ಅವಶ್ಯ ಗುರಿಯಾಗುತ್ತೇನೆಂದು ಭಾವಿಸುತ್ತೇನೆ.

ಶಕ್ತ್ಯಾವಿನಾಪಿ ಭವಬಂಧನಿವಾರಣಾರ್ಥಂ ।
ತ್ವದ್ಭಕ್ತಿರೇವ ಮಮಶಕ್ತಿರಿತಿ ಪ್ರವೃತ್ತಃ ॥
ಸ್ವಾಮಿನ್! ಕ್ಷಮಸ್ವ ಮಮ ದುಷ್ಕರಸಾಹಸಂ ಯತ್ ।
ಬಾಲಸ್ಯ ಬಾಲಿಶಮಿದಂ ಸಮವೇಹಿ ಕೃತ್ಯಮ್ ॥ ೨ ॥

ಎಲೈ ಸ್ವಾಮಿಯೇ! ಶಕ್ತಿ ಇಲ್ಲವಾದರೂ ಸಂಸಾರ ಬಂಧನದ ಬಿಡುಗಡೆಗಾಗಿ, "ನಿನ್ನ ಭಕ್ತಿಯೇ ನನ್ನ ಶಕ್ತಿ" ಎಂದು ನಂಬಿ ಕಾರ್ಯ ಪ್ರವೃತ್ತನಾಗಿದ್ದೇನೆ. ಈ ನನ್ನ ಸಾಹಸಾತಿರೇಕವನ್ನು ಓರ್ವ ಅಜ್ಞ ಬಾಲಕನ ಹುಡುಗಾಟವೆಂದು ಭಾವಿಸಿ ಮನ್ನಿಸು ಪ್ರಭು!

ಅಲ್ಪಶ್ರುತೋ ಜಡಮತಿಃ ಕ್ವ ಚ ನಿರ್ಗುಣೋಽಹಂ ।
ಜ್ಞಾನಾದ್ಯನಂತ ಭವದೀಯಗುಣಾಃ ಕ್ವದೇವ ॥
ಬಾಲಃಶಶಾಂಕಮಿವ ವ್ಯೋಮಗತಂ ಗೃಹೀತುಂ ।
ಹಸ್ತೌ ಪ್ರಸಾರಯತಿ ಸೈವ ದಶಾ ಮದೀಯಾ ॥ ೩ ॥

ಪ್ರಭುವೇ ! ಮಂದಬುದ್ಧಿಯು ಅಲ್ಪಜ್ಞ ಹಾಗೂ ಗುಣಹೀನನಾದ ನಾನೆಲ್ಲಿ? ನಿಮ್ಮ ಅಮೋಘವಾದ ಅನಂತಜ್ಞಾನಾದಿ ಆ ಮಹಾ ಗುಣಗಳೆಲ್ಲಿ? ಆಗಸದಲ್ಲಿರುವ ಚಂದಿರನನ್ನು ಹಿಡಿವೆನೆಂದು ತನ್ನ ಪುಟ್ಟ ಕೈಗಳನ್ನು ಮೇಲಕ್ಕೆ ಚಾಚಿ ಪಟ್ಟುಹಿಡಿವ ಪುಟ್ಟ ಮಗುವಿನಂತಿದೆ ನನ್ನ ಪಾಡು!

ಏತಾದೃಶೋಽಪಿ ತವಭಕ್ತಿವಶಾಜ್ಜಿನೇಶ! ।
ಸ್ತೋತ್ರಂ ವಿರಚ್ಯ ತವಪಾದಯುಗೇಽರ್ಪಯಾಮಿ ॥
ಚಿನ್ವಂತು ದೋಷನಿಚಯಾತ್ ಸುಗುಣಾನ್ ಗುಣಜ್ಞಾಃ ।
ಹಂಸೀವ ವಾರಿವಿಕೃತಿಂ ಪರಿಹಾಯ ದುಗ್ಧಮ್ ॥ ೪ ॥

ಹೇ ಸ್ವಾಮಿನ್! ಹೀಗಿದ್ದರೂ ಭಕ್ತಿವಶದಿಂದ ಸ್ತೋತ್ರವನ್ನು ರಚಿಸಿ ನಿಮ್ಮ ಚರಣಗಳಿಗೆ ಅರ್ಪಿಸುತ್ತೇನೆ. ಹಂಸಪಕ್ಷಿಯು ಹಾಲಿನಲ್ಲಿರುವ ನೀರಿನ ಅಂಶವನ್ನು ತ್ಯಜಿಸಿ ಕೇವಲ ಹಾಲನ್ನು ಹೀರಿ

ಸ್ವೀಕರಿಸುವಂತೆ ನನ್ನೀ ಸ್ತೋತ್ರದಲ್ಲಿರಬಹುದಾದ ದೋಷಗಳ ಸಮುದಾಯದಿಂದ ಗುಣಗಳನ್ನು ಮಾತ್ರ ಆಯ್ದು ಗುಣಗ್ರಾಹಿಗಳು ಸ್ವೀಕರಿಸಲೆಂದು ಹಾರೈಸುತ್ತೇನೆ.

ತೀರ್ಥಂಕರತ್ವವರಪುಣ್ಯವಶಾತ್ ಕುಬೇರಃ ।
ಷಣ್ಮಾಸಪೂರ್ವಮಕರೋದ್ಭುವಿ ರತ್ನವೃಷ್ಟಿಂ ॥
ಗರ್ಭಾವತಾರಸಮಯೇ ಸುರಪೋಽವತೀರ್ಯ ।
ಶಚ್ಯಾ ಸಹಾತ್ರ ಜನನೀಮುಪಮಾಚಚಾರ ॥ ೫ ॥

“ತೀರ್ಥಂಕರತ್ವ” ವೆಂಬ ಪುಣ್ಯಕರ್ಮದ ಪ್ರಭಾವದಿಂದ ದೇವೇಂದ್ರನ ಸೂಚನೆಯ ಮೇರೆಗೆ ಕುಬೇರನು, ಸ್ವಾಮಿಯು ಗರ್ಭಕ್ಕೆ ಅವತರಿಸಲು ಆರು ತಿಂಗಳಿರುವಾಗಲೇ ಆಕಾಶದಿಂದ ಅರಮನೆಯ ಪ್ರಾಂಗಣಕ್ಕೆ ಅಪೂರ್ವ ಹಾಗೂ ಅಮೂಲ್ಯವಾದ ರತ್ನಗಳ ಮಳೆಯನ್ನು ಸುರಿಸಿದನು. ಭಗವಂತನು ಜನನಿಯ ಪುಣ್ಯಗರ್ಭಕ್ಕೆ ಅವತರಿಸಿದಾಗ ದೇವೇಂದ್ರನು ಶಚೀದೇವಿಯೊಂದಿಗೆ ಅಲ್ಲಿಗೆ ಆಗಮಿಸಿ, ಪುಣ್ಯಮಯಿಯಾದ ಆ ಜಿನಮಾತೆಯ ಸೇವೆಗಾಗಿ ಸಕಲ ಸುವ್ಯವಸ್ಥೆಗಳನ್ನೂ ಅನುಗೊಳಿಸಿ, “ಗರ್ಭಾವತರಣ ಕಲ್ಯಾಣ”ವೆಂಬ ಪೂಜಾತಿಶಯಗಳಿಂದ ಜಿನಜನನಿಯ ಸೇವೆಗೈದು ಪುನೀತನಾದನು.

ಪ್ರಾಚ್ಯಾಂ ಪ್ರಭಾತಸಮಯೇ ಸ್ಫುರದಂಶುಮಾಲೀ ।
ಭಾಸ್ವಾನಿವ ಪ್ರಬಲಕರ್ಮತಮೋ ವಿನಾಶೀ ॥
ಸರ್ವಾಂಗಸುಂದರಸುಲಕ್ಷಣಕಾಂತದೇಹೋ ।
ಬ್ರಾಹ್ಮ್ಯಶ್ವಸೇನ ತನುಜೋಽಜನಿ ವಾರಣಾಸ್ಯಾಮ್ ॥ ೬ ॥

ಸುಪ್ರಭಾತದ ಸುಪ್ರಸನ್ನ ಸಮಯದಲ್ಲಿ ಆಕಾಶದ ಪೂರ್ವದಿಕ್ಕಿನಲ್ಲಿ ಉಜ್ವಲವಾದ ತನ್ನ ಕಿರಣ ಜಾಲಗಳನ್ನು ಪಸರಿಸಿ, ಉದಯಿಸುವ ಬಾಲಸೂರ್ಯನಂತೆ, ವಾರಣಾಸೀ ನಗರದಲ್ಲಿ ಪ್ರಬಲವಾದ ಕರ್ಮರೂಪೀ ಗಾಢಾಂಧಕಾರವನ್ನು ದೂರಗೊಳಿಸುವ ಸರ್ವಾಂಗ ಸುಂದರನೂ, ಶುಭಲಕ್ಷಣ ಸಂಪನ್ನನೂ ಆಗಿ ಬ್ರಾಹ್ಮಿಲಾದೇವಿ ಮತ್ತು ಅಶ್ವಸೇನ (ವಿಶ್ವಸೇನ) ಮಹಾರಾಜರಿಗೆ ಪಾರ್ಶ್ವನಾಥ ಪ್ರಭುವು ಸುಪುತ್ರನಾಗಿ ಜನ್ಮ ತಳೆದನು.

## (ಯುಗಲ ಶ್ಲೋಕೌ)

ಜ್ಞಾತ್ವಾಜಿನೇಂದ್ರಜನನಂ ಮುದಿತಸ್ಸುರೇಂದ್ರೋ ।
ಭಕ್ತ್ಯಾಮರೈಸ್ಸಹ ಭುವಂ ಸಹಸಾವತೀರ್ಣಃ ॥
ಮಾಯಾವಿನಿರ್ಮಿತ ಶಿಶುಂ ಮಘವಾಧಿದೇಶಾ ।
ನ್ನಿಕ್ಷಿಪ್ಯ ಮಾತೃಸವಿಧೇ ಸುರರಾಜಪತ್ನೀ ॥ ೭ ॥

ಪತ್ಯೇ ದದೌ ಜಿನಸುತಂ ಸುದತೀ ಸುಭಕ್ತ್ಯಾ ।
ಪತ್ನ್ಯಾ ಸಮರ್ಪಿತ(ಶಿಶುಂ) ಜಿನಂ ಮುದಿತಸ್ಸುರೇಶೋ ॥
ರೋಮಾಂಚಕಂಪಿತಕರಾಂಗುಲಿಭಿರ್ಗೃಹೀತ್ವಾ ।
ಐರಾವತೇಭಮಧಿರುಹ್ಯ ತತಃ ಪ್ರತಸ್ಥೇ ॥ ೮ ॥

ಭಗವಾನ್ ಪಾರ್ಶ್ವನಾಥ ಪ್ರಭುವಿನ ಶುಭಜನನವನ್ನು ತಿಳಿದು ಹರ್ಷಚಿತ್ತನಾದ ದೇವೇಂದ್ರನು ಭಕ್ತರಾದ ದೇವತೆಗಳೊಂದಿಗೆ ತಕ್ಷಣ ಭೂಮಿಗಿಳಿದು ಬಂದನು.ದೇವೇಂದ್ರನ ಆಜ್ಞೆಯ ಮೇರೆಗೆ ಆತನ ಸತಿಯಾದ ಶಚೀದೇವಿಯು ಮಾಯಾನಿರ್ಮಿತವಾದ ಮಗುವೊಂದನ್ನು ತಾಯಿಯ ಮಗ್ಗುಲಲ್ಲಿ ಮಲಗಿಸಿ ಭಕ್ತಿಯಿಂದ ಆ ಜಿನ ಬಾಲಕನನ್ನು

ತನ್ನ ಪತಿಯು ಕೈಗಿರಿಸಿದಳು. ಪತ್ನಿಯಿಂದ ಸಮರ್ಪಿಸಲ್ಪಟ್ಟ ಜಿನಶಿಶು ವನ್ನು ಜಿನಭಕ್ತಿಯ ಭರಕ್ಕೆ ರೋಮಾಂಚಗೊಂಡು ಕಂಪಿಸುತ್ತಿರುವ ಕೈ ಬೆರಳುಗಳಿಂದ ಸ್ವೀಕರಿಸಿ, "ಐರಾವತ"ವೆಂಬ ಸುರಲೋಕದ ಗಜ ರಾಜ(ಆನೆ)ನನ್ನೇರಿ ದೇವರಾಜನು ಅಲ್ಲಿಂದ ಪ್ರಯಾಣಗೈದನು.

ನೀತ್ವಾ ತದೈವ ಜಿನಬಾಲಮಥಾಮರೇಶೋ ।
ನಾಕೌಕಸಾಂ ಜಯನಿನಾದಯುತಸ್ಸಹರ್ಷಃ ॥
ಶಚ್ಯಾ ಸಹ ಪ್ರಥಿತಮೇರುಗಿರಿಂ ಚ ಗತ್ವಾ ।
ಜನ್ಮಾಭಿಷೇಕಮಹಮತ್ರ ಚಕಾರ ತಸ್ಯ ॥ ೯ ॥

ಅನಂತರ ದೇವೇಂದ್ರನು ದೇವತೆಗಳ ಜಯ ಜಯಕಾರದೊಂದಿಗೆ ಶಚೀದೇವಿಯೊಡಗೂಡಿ ಆಗಲೇ ಆ ಜಿನಬಾಲಕನನ್ನು ಸುಪ್ರಸಿದ್ಧ ವಾದ ಸುಮೇರು ಪರ್ವತದಲ್ಲಿರುವ ಪಾಂಡುಕಾ ಶಿಲೆಯ ಪೀಠಕ್ಕೆ ಕರೆದೊಯ್ದು ಅಲ್ಲಿ ವೈಭವಪೂರ್ವಕವಾಗಿ ಜನ್ಮಾಭಿಷೇಕಕಲ್ಯಾಣ ವನ್ನು ನೆರವೇರಿಸಿದನು.

ಬಾಲೋಽಪ್ಯವರ್ಧತ ಕಲಾಕಲಿತೋ ಮನೋಜ್ಞ ।
ಚಂದ್ರೋಯಥಾ ಪ್ರತಿದಿನಂ ಸಿತಪಕ್ಷಗಾಮಿ ॥
ಸೂನುಂ ಯುವಾನಮಥ ವೀಕ್ಷ್ಯ ಪಿತಾ ಮುದೈನಂ ।
ವ್ಯೂಢಂ ದಿದೃಕ್ಷುರಪಿ ಯತ್ನಪರೋ ಬಭೂವ ॥ ೧೦ ॥

ಶುಕ್ಲಪಕ್ಷದ ಚಂದಿರನು ಪ್ರತಿದಿನವೂ ಕಲಾಸಂಪನ್ನನಾಗಿ ಅಭಿ ವೃದ್ಧಿಯನ್ನೈದುವಂತೆ ರಾಜಕುಮಾರನಾದ ಪಾರ್ಶ್ವ ಪ್ರಭುವು ಕ್ರಮೇಣ ಸಕಲ ಕಲಾ (ವಿದ್ಯಾ) ಸಂಪನ್ನನಾಗಿ ಬೆಳೆದು ಯುವಾವಸ್ಥೆಯನ್ನು

ತಳೆದನು. ಪುತ್ರನು ಯೌವನಾವಸ್ಥೆಗೆ ಬಂದುದನ್ನು ಕಂಡು ಸಂತೋಷ ಗೊಂಡ ವಿಶ್ವಸೇನ ಮಹಾರಾಜನು, ಮಗನು ವಿವಾಹಿತನಾಗುವುದನ್ನೇ ನೋಡಲು ತವಕಿಸುತ್ತಿದ್ದು ವಿವಾಹದ ಯತ್ನದಲ್ಲಿ ತಾನು ತೊಡಗಿದನು.

ಮನೋಗತಂ ಪಿತುರಯಂ ಸಹಸಾ ನಿಷಿಧ್ಯ ।
ಸಂಸಾರನಶ್ವರಸುಖಾದ್ವಿರತಿಂ ದದರ್ಶ ॥
"ಸ್ವಾತ್ಮೈವ ಬಂಧುರಿತಿ ಮೇ" ಮತಿಮಾನಧೀತ್ಯ ।
ಮುಕ್ತಿಶ್ರಿಯಾಂ ಸ್ಥಿರಮನಾಸ್ಸ ಬಭೂವ ಧೀರಃ ॥ ೧೧ ॥

ತಂದೆಯ ಮನೋಗತ ಇಚ್ಛೆಯನ್ನು ಅರಿತು ತಕ್ಷಣ ಅದನ್ನು ವಿರೋಧಿಸಿ ಬುದ್ಧಿಶಾಲಿಯಾದ ಪಾರ್ಶ್ವಕುಮಾರನು ನಶ್ವರವಾದ ಸಂಸಾರ ಸುಖದಿಂದ ವಿರಕ್ತನಾದನು, ಹಾಗೂ "ಆತ್ಮನಿಗೆ ತನ್ನಾತ್ಮನೇ ಬಂಧು"ವೆಂದು ತಿಳಿದು ಆ ಧೀರನು ಮುಕ್ತಿಲಕ್ಷ್ಮಿಯಲ್ಲಿ ತನ್ನ ಮನಸ್ಸನ್ನು ಸ್ಥಿರಗೊಳಿಸಿದನು.

ಪುತ್ರಾದಿಬಂಧುಜನಸಂಕುಲಮಧ್ಯವರ್ತೀ ।
ದೇಹೀ ತು ಮೋಹವಶತೋ ಭಜತೀಹ ದುಃಖಂ ॥
"ಸ್ವಾತ್ಮೈವ ಬಂಧುರಿತಿ"ಯೋ ಮತಿಮಾನಧೀತೇ ।
ಮುಕ್ತಿಶ್ರಿಯಂ ವ್ರಜತಿ ಸತ್ವರಮೇವ ಭವ್ಯಃ ॥ ೧೨ ॥

ಮಾತೃ-ಪಿತೃ, ಪುತ್ರ-ಕಲತ್ರಾದಿ ಬಂಧು ಜನಗಳ ಮಧ್ಯದಲ್ಲಿದ್ದು ಈ ದೇಹಿ(ಜೀವ)ಯು ಮೋಹ ಪರವಶನಾಗಿ ಸಂಸಾರ ದುಃಖಕ್ಕೀಡಾಗುತ್ತಾನೆ. ಬುದ್ಧಿವಂತನಾದ ಭವ್ಯ ಜೀವಿಯು "ಆತ್ಮನಿಗೆ ಆತ್ಮನೇ ಬಂಧು"ವೆಂದು ತಿಳಿದು ಸಂಸಾರದಿಂದ ವಿರಕ್ತನಾಗಿ ಶೀಘ್ರದಲ್ಲೇ ಮೋಕ್ಷ ಲಕ್ಷ್ಮಿಯನ್ನು ಒಲಿಸಿ ಸುಖಿಯಾಗುತ್ತಾನೆ.

ಮಿಥ್ಯಾದೃಶಾ ಪಿಹಿತದೃಷ್ಟಿರಯಂ ಹಿ ಮೂಢೋ ।
ಜೀವಸ್ತು ರಾಗವಶಗೋ ಭ್ರಮತೀಹ ಚಕ್ರೇ ॥
ಸ್ವಾತ್ಮೈವ ಬಂಧುರಿತಿಯೋ ಮತಿಮಾನಧೀತೇ ।
ಮುಕ್ತಿಶ್ರಿಯಂ ವ್ರಜತಿ ಸತ್ವರಮೇವ ಭವ್ಯಃ ॥ ೧೩ ॥

ದರ್ಶನಮೋಹನೀಯ ಕರ್ಮೋದಯದಿಂದ ಮುಚ್ಚಲ್ಪಟ್ಟ ಕಣ್ಣುಳ್ಳವನಾಗಿ, ಅಂದರೆ ಆತ್ಮಜ್ಞಾನ್ಯ ಶೂನ್ಯನಾಗಿ ಈ ಜೀವನು ರಾಗ (ಮೋಹ) ವಶದಿಂದ ದೇವ, ನಾರಕ, ಮನುಷ್ಯ, ತಿರ್ಯಂಚಗಳೆಂಬ ಚತುರ್ಗತಿರೂಪವಾದ ಈ ಸಂಸಾರ ಚಕ್ರದಲ್ಲಿ ಸದಾ ಸುತ್ತುತ್ತಿದ್ದಾನೆ. ತನ್ನ ಆತ್ಮನಿಗೆ ಆತ್ಮನೇ ಬಂಧುವೆಂದು ನಂಬಿ ತಿಳಿಯುವ ಜ್ಞಾನೀ ಭವ್ಯನು ಶೀಘ್ರವೇ ಮುಕ್ತಿಶ್ರೀ(ಮೋಕ್ಷ)ಯನ್ನು ಹೊಂದುವನು.

ದುರ್ಗಂಧಮೂತ್ರ ಮಲಮಾಂಸಲದೇಹ ಏವ ।
ಜೀವೋಽಹಮಿತ್ಯತಿತರಾಂ ಭ್ರಮತೀಹ ಮೋಹೀ ॥
ಸ್ವಾತ್ಮಾನಮತ್ರ ತಿಮಿರಾವೃತಲೋಚನೋಽಯಂ ।
ದೇಹಸ್ಥಿತಂ ಹ್ಯಪಿ ನ ಪಶ್ಯತಿ ಶುದ್ಧರೂಪಮ್ ॥ ೧೪ ॥

ಮಲ- ಮೂತ್ರ- ಮಾಂಸಗಳ ಮುದ್ದೆಯಂತಿರುವ ದುರ್ಗಂಧ ಮಯವಾಗಿ ನಾರುತ್ತಿರುವ ಈ ದೇಹವೇ ಜೀವ(ನಾನು)ವೆಂದು ಮೋಹಾತಿರೇಕದಿಂದಭ್ರಮಿಸಿ ಈ ಜೀವನು ಅಜ್ಞಾನಾಂಧಕಾರದಿಂದ ಕಣ್ಣಿದ್ದೂ ಕುರುಡನಂತೆ ದೇಹದಲ್ಲೇ ಇರುವ ಭಿನ್ನವಾದ ಶುದ್ಧಾತ್ಮ ಸ್ವರೂಪವನ್ನು ಅರಿಯದವನಾಗಿದ್ದಾನೆ.

ರಾಜ್ಯಾದಿವೈಭವಮಿದಂ ಜಲಬುದ್ಬುದಾಭಂ ।
ದೇಹಸ್ಥಯೌವನಮಿದಂ ಜರಯಾಭಿಭಾವ್ಯಂ ॥

ಭೋಗೋಪಭೋಗವಿಷಯೋ ವಿಷವದ್ವಿಘಾತೀ ।
ಮೂಢಾ ವೃಥಾ ಧನಮದಾಭಿಹತಾ ಭ್ರಮಂತಿ ॥ ೧೫ ॥

ಈ ರಾಜ್ಯಾದಿವೈಭವವು ನೀರ್ಗುಳ್ಳೆಯಂತೆ ಕ್ಷಣ ನಶ್ವರವಾದುದು. ದೇಹದಲ್ಲಿ ಕಾಣುವ ಈ ಯೌವನವು ಮುದಿತನದ ಬಾಯಿಗೆ ತುತ್ತಾಗುತ್ತದೆ. ಐಂದ್ರಿಯಿಕವಾಗಿರುವ ಈ ಭೋಗೋಪಭೋಗ ವಿಷಯುವು ವಿಷದಂತೆ ಘಾತಕವಾಗಿದೆ. ಹೀಗಿದ್ದರೂ ಮೂರ್ಖನು ಹಣದ ಕೊಬ್ಬಿನಿಂದ ಉಬ್ಬಿ ವ್ಯರ್ಥವಾಗಿ ಹಾರಾಡುತ್ತಾನೆ.

ಆತ್ಮಾನಮಾತ್ಮನಿ ನಿಯಮ್ಯ ಶರೀರಭಿನ್ನಂ ।
ಪ್ರಾಪ್ನೋಮಿ ಶುದ್ಧಮನಸಾ ಚಿದನಂತಸೌಖ್ಯಂ ।
ಇತ್ಥಂ ವಿಚಿಂತ್ಯ ಹೃದಯೇ ತ್ವಮಪಾಸ್ಯ ಮೋಹಂ ।
ಧನ್ಯೋ ಹಿ ನಿರ್ವೃತಿಪರೋ ಗಹನಂ ಗತೋಽಸಿ ॥ ೧೬ ॥

ಈ ರೀತಿ ಶರೀರ ಭಿನ್ನನಾದ ಆತ್ಮನನ್ನು ಆತ್ಮನಲ್ಲೇ ಸ್ಥಿರಗೊಳಿಸಿ ಶುದ್ಧಭಾವದಿಂದ, ಶುದ್ಧ ಚೈತನ್ಯ ಸ್ವರೂಪಿಯಾದ ಆತ್ಮನ ಚಿದಾನಂದ ಸೌಖ್ಯವನ್ನು ಪಡೆಯುವೆನೆಂದು ಯೋಚಿಸಿ ನೀನು ಮೋಹವನ್ನು ತ್ಯಜಿಸಿ ವೈರಾಗ್ಯಪರನಾಗಿ ಅರಮನೆಯಿಂದ ಅರಣ್ಯದೆಡೆಗೆ ನಡೆದೆ.

"ಸಿದ್ಧಂ ನಮೋ ಭವಹರಂ" ವರಮಂತ್ರಮುಕ್ತ್ವಾ ।
ಉತ್ಪಾಟ್ಯ ಕೇಶನಿಚಯಾನ್ ಮಣಿಭೂಷಣಾನಿ ।
ತ್ವಾಂ ವೀಕ್ಷ್ಯ ವೀತವಸನಂ ಧೃತಜಾತರೂಪಂ ।
ದೀಕ್ಷಾಮಹಂ ಸುರಪತಿರ್ವಿಧಿನಾ ಚಕಾರ ॥ ೧೭ ॥

"ಓಂ ನಮಃ ಸಿದ್ಧೇಭ್ಯಃ" ಎಂಬ ಶ್ರೇಷ್ಠ ಮಂತ್ರವನ್ನುಚ್ಚರಿಸಿ ತಲೆಕೂದಲುಗಳನ್ನು ಕೈಯಿಂದ ಕಿತ್ತೆಸೆದು (ಕೇಶಲುಂಛನಗೈದು) ಮೈ ಮೇಲಿದ್ದ ಅಮೂಲ್ಯ ರತ್ನಾಭರಣಗಳನ್ನೂ. ವಸ್ತ್ರಾದಿ ಸಮಸ್ತ ಪರಿಗ್ರಹ ಗಳನ್ನೂ ಕಳಚಿ ಜಾತರೂಪಧರ(ದಿಗಂಬರ) ಮುನಿಯಾದ ನಿನ್ನನ್ನು ಕಂಡು ದೇವೇಂದ್ರನು ವಿಧಿವತ್ತಾಗಿ "ದೀಕ್ಷಾ ಕಲ್ಯಾಣ" ಪೂಜೆಯನ್ನು ಮಾಡಿದನು.

ಲೌಕಾಂತಿಕಾಸ್ಸುರವರಾ ಹಿ ತದಾ ಸಮೇತ್ಯ ।
ವೈರಾಗ್ಯವರ್ಧನಪರೈರ್ಮಧುರೈರ್ವಚೋಭಿಃ ॥
ಸಂಸಾರಭೋಗವಿಷಯೇ ತವ ಹೇಯಭಾವಂ ।
ಸಂಸ್ತೂಯ ಜಗ್ಮುರಥ ತೇ ಪಭುಭಕ್ತಿಭಾಜಃ ॥ ೧೮ ॥

ಅದೇ ಸಮಯದಲ್ಲಿ ಬ್ರಹ್ಮಸ್ವರ್ಗದಿಂದ ಪಭುಭಕ್ತಿ ಪರಾಯಣ ರಾದ ಲೌಕಾಂತಿಕ ದೇವತೆಗಳು ಆಗಮಿಸಿ ನಿಮ್ಮ ವೈರಾಗ್ಯ ಭಾವನೆ ಯನ್ನು ಹೆಚ್ಚಿಸುವ ಮಧುರವಚನಗಳಿಂದ ಸಂಸಾರಭೋಗ ವಿಷಯ ಗಳ ಬಗ್ಗೆ ನಿಮ್ಮಂತರಂಗದಲ್ಲಿ ಉದ್ಭವಿಸಿರುವ ಹೇಯ(ಜಿಗುಪ್ಸೆಯ) ಭಾವವನ್ನು ಹೊಗಳಿ ಸ್ವರ್ಗಕ್ಕೆ ಮರಳಿ ಹೋದರು.

## ಯುಗಲಶ್ಲೋಕೌ

ತೀವ್ರಾತಪೇ ಗಿರಿಶಿಖಾಗ್ರಮುಪೇತ್ಯ ತಪ್ತಂ ।
ಹೈಮೇಚ ಶೀತಲನದೀತಟಮಭ್ಯುಪೇತ್ಯ ॥
ವಾರ್ಷೇ ತು ವೃಕ್ಷತಲಮೇತ್ಯ ತಪೋಽನುತಪ್ತಂ ।
ಇತ್ಥಂ ತದಾ ವಿಹರತಾ ವಿಭುನಾ ವನಾಂತೇ ॥ ೧೯ ॥

ದಂದಹ್ಯಮಾನಮನಲೇ ಹುತಕಾಷ್ಠಮಧ್ಯೇ ।
ದೃಷ್ಟಂ ಚ ಸರ್ಪಯುಗಲಂ ಮರಣೋನ್ಮುಖಂ ಯತ್ ॥
ಮಂತ್ರೋಪದೇಶವಶತೋ ಭವತಃ ಪ್ರಭಾವಾತ್ ।
ಮೃತ್ವಾ ಗತಂ ಹಿ ಭುವನೇ ಭವನಾಮರತ್ವಮ್ ॥ ೨೦ ॥

ಬೇಸಿಗೆಯ ಕಡುಬಿಸಿಲಲ್ಲಿ ಪರ್ವತದ ಶಿಖರಗಳಲ್ಲೂ, ಚಳಿಗಾಲದಲ್ಲಿ(ಮೈನಡುಗಿಸುವ ಚಳಿಯಲ್ಲಿ) ಶೀತಲವಾದ (ತಣ್ಣಗಿನ) ನದಿಯ ದಂಡೆಯ ಮೇಲೂ, ಮಳೆಗಾಲದಲ್ಲಿ ತೊಟ್ಟಿಕ್ಕುವ ಮರದ ಬುಡದಲ್ಲೂ, ಕಠಿಣವಾದ ತಪಸ್ಸನ್ನಾಚರಿಸುತ್ತ ನೀನು ಕಾನನ(ಕಾಡು)ದಲ್ಲಿ ಸಂಚರಿಸುತ್ತಿದ್ದಾಗ ಯಜ್ಞದಲ್ಲಿ ಸುಟ್ಟ ಸಮಿತ್ತಿನ ಕಟ್ಟಿಗೆಯ ಒಳಭಾಗದಲ್ಲಿ ಬೆಂದು ಅರೆಜೀವವಾಗಿ ಮರಣೋನ್ಮುಖವಾಗಿದ್ದ ಸರ್ಪಗಳ ಜೋಡಿಯನ್ನು ನೋಡಿದೆ. ಮರಣಕ್ಕೀಡಾಗುತ್ತಿದ್ದ ಆ ಸರ್ಪ ಜೋಡಿಗೆ ಪಂಚನಮಸ್ಕಾರದ ಮಹಾಮಂತ್ರವನ್ನು ಉಪದೇಶಿಸಿದೆ. ನಿನ್ನ ಮಂತ್ರೋಪದೇಶದ ಪ್ರಭಾವದಿಂದ ಸತ್ತು ಆ ಸರ್ಪಜೋಡಿಯು ಮರಣಾನಂತರ ಭವನವಾಸೀ ದೇವ ದಂಪತಿ(ಧರಣೇಂದ್ರ-ಪದ್ಮಾವತಿ) ಗಳಾಗಿ ಜನಿಸಿತು.

ಹಿಂಸಾಯುತೇ ವಿವಿಧ ಕರ್ಮಣಿ ಸಂವಿಲಗ್ನಾ ।
ಮೂಢಾಶ್ಚರಂತಿ ಖಲು ಬಾಲತಪಾಂಸಿ ನಿತ್ಯಂ ॥
ನಿಷ್ಪೀಡ್ಯ ಮಂದಮತಯುಸ್ಸಿಕತಾಸಮೂಹಂ ।
ಚೇಚ್ಛಂತಿ ತೈಲಮಿತಿ ಚಿತ್ರಮಿದಂ ಹಿ ಲೋಕೇ ॥ ೨೧ ॥

ಮೂಢ ಜನರು ಪುಣ್ಯಪ್ರಾಪ್ತಿಯಾಗುವುದೆಂಬ ಭ್ರಾಂತಿಯಿಂದ ಹಿಂಸಾಚಾರಗಳಿಂದ ಕೂಡಿದ ವಿವಿಧ ಪಾಪ ಕಾರ್ಯಗಳಲ್ಲಿ ತೊಡಗಿ ನಿತ್ಯವೂ ಬಾಲತಪಸ್ಸ(ಅಜ್ಞತಪಸ್ಸ)ನ್ನಾಚರಿಸುತ್ತಾರೆ. ಮಂದಮತಿಗಳು

ಮರಳನ್ನು ಹಿಂಡಿ ಎಣ್ಣೆ ಪಡೆಯುತ್ತೇವೆಂದು ಭ್ರಮಿಸುವಂತೆ ಲೋಕದಲ್ಲಿ ಇದಕ್ಕಿಂತ ಹೆಚ್ಚಾದ ಅಚ್ಚರಿ ಏನಿದೆ?

ಧೂರ್ತೋಽಹಿ ಪೂರ್ವಭವಸಂಚಿತರೋಷತಪ್ತೋ ।
ಧ್ಯಾನೇರತಂ ಜಿನವರಂ ಕಮಠೋಽಭಿಧಾವನ್ ॥
ದುರ್ವಾರಮಾರುತಜಲೈ ಬೃಹದಶ್ಮಖಂಡೈ ।
ಸ್ಸಂಪೀಡ್ಯ ದುಷ್ಕೃತಮಪಾರಮಹೋ ಚಕಾರ ॥ ೨೧ ॥

ಜನ್ಮಜನ್ಮಾಂತರಗಳಿಂದ ಪರಂಪರಾಗತವಾಗಿ ಬಂದ ಕ್ರೋಧ ಕಷಾಯ-ದಿಂದ ಸಂತಪ್ತನಾದ ದುಷ್ಟ ಕಮಠಾಸುರನು ತನ್ನ ವೈಕ್ರಿಯಿಕ ಶಕ್ತಿಯಿಂದ ಭಯಂಕರವಾದ ಬಿರುಗಾಳಿ, ಜಡಿಮಳೆ ಹಾಗೂ ಕಲ್ಲಿನ ಸುರಿಮಳೆಗೈದು ಧ್ಯಾನಮಗ್ನರಾದ ಪಾರ್ಶ್ವಪ್ರಭುವಿಗೆ ವಿಧವಿಧವಾಗಿ ಪೀಡಿಸಿ ಘೋರೋಪಸರ್ಗಗೈದನು.

ದುಷ್ಟೇನ ತೇನ ಕಮಠೇನ ತಪೋನುರಕ್ತೇ ।
ಸಂಪಾತಿತಾ ಜಿನವರೇ ಮಹದಗ್ನಿವೃಷ್ಟಿಃ ॥
ಧೂರ್ತಸ್ಯ ದುಷ್ಕೃತಮಿದಂ ಸಮವೇಕ್ಷ್ಯ ಲೋಕೋ ।
"ಹಾಹಾ" ರವಂ ಕಿಲ ಚಕಾರ ಭಯೇನ ಭೂಯಃ ॥ ೨೨ ॥

ದುಷ್ಟನಾದ ಆ ಕಮಠಾಸುರನು ತಪೋನಿರತನಾದ ಭಗವಂತನ ಮೇಲೆ ಸತತವಾಗಿ ಬೆಂಕಿಯ ಮಳೆ ಸುರಿಸಿದನು. ದುಷ್ಟನ ಈ ದುಷ್ಕೃತ್ಯವನ್ನು ಕಂಡು ಲೋಕದ ಜನರು ಭಯದಿಂದ ಬಾರಿಬಾರಿಗೂ ಹಾಹಾಕಾರ ಮಾಡಿದರು.

ಪೂರ್ವೋಪಕಾರ ಮನುಚಿಂತ್ಯ ತದಾಗತೇನ ।
ಪ್ರಾಚ್ಛಾದ್ಯ ನಾಗಯುಗಲೇನ ಫಣೈರ್ವಿಶಾಲೈಃ ॥
ಶೀರ್ಷಂ ವಿಭೋಸ್ತದನು ಪಾರ್ಶ್ವಜಿನೇಶ್ವರಸ್ಯ ।
ದೂರೀಕೃತಃ ಖಲಕೃತೋಽಪಿ ಮಹೋಪಸರ್ಗಃ ॥ ೨೪ ॥

ಆ ಸಮಯದಲ್ಲಿ ಹಿಂದೆ ಪ್ರಭುವು ತಮಗೆ ಮಾಡಿದ್ದ ಮಹೋಪಕಾರ(ಮಂತ್ರೋಪದೇಶ)ವನ್ನು ಸ್ಮರಿಸಿಕೊಂಡು ನಾಗಲೋಕದಲ್ಲಿ ಭವನವಾಸಿ ದೇವತೆಗಳಾಗಿ ಜನಿಸಿದ್ದ ನಾಗದಂಪತಿ(ಧರಣೇಂದ್ರ-ಪದ್ಮಾವತೀ)ಗಳು ಅಲ್ಲಿಗೆ ಬಂದು ಭಗವಂತನ ಮಸ್ತಕದ ಮೇಲೆ ತಮ್ಮ ವಿಸ್ತಾರವಾದ ಹೆಡೆಗಳನ್ನು ಹರಡಿ ದುರ್ಜನನು ಗೈದ ಘೋರೋಪಸರ್ಗವನ್ನು ನಿವಾರಣೆ ಮಾಡಿದರು.

ಕ್ರೋಧೋದ್ಧತಸ್ಯ ಕಮಠಸ್ಯ ಮಹೋಪಸರ್ಗಂ ।
ಜಿತ್ವಾ ಪ್ರಶಾಂತಮನಸಾ ತಪಸಾಘಶತ್ರೂನ್ ॥
ಕ್ರೋಧಾದಿದೋಷನಿವಹಾನ್ ಪರಿಹಾಯ ಸರ್ವಾನ್ ।
ಪ್ರಾಪತ್ಸುಬೋಧಮಮಲಂ ಭಗವಾನ್ ಸ ಪಾರ್ಶ್ವಃ ॥ ೨೫ ॥

ಕ್ರೋಧ ಸಂತಪ್ತನಾದ ಕಮಠಾಸುರನ ಘೋರೋಪಸರ್ಗವನ್ನು ಶಾಂತ ಮನಸ್ಸಿನಿಂದ ಗೆದ್ದು ಕ್ರೋಧವೇ ಮೊದಲಾದ ಸಮಸ್ತ ಕರ್ಮ ಶತ್ರುಗಳನ್ನು ತಪಸ್ಸಿನ ಮೂಲಕ ಜಯಿಸಿ ಭಗವಾನ್ ಪಾರ್ಶ್ವನಾಥ ಸ್ವಾಮಿಯು ನಿರ್ಮಲವಾದ ಕೇವಲ ಜ್ಞಾನವನ್ನು ಪಡೆದನು.

ನಿರ್ಭಿದ್ಯ ಮೋಹಪಟಲಾನ್ ಕಿರಣೈರ್ವಿವಸ್ವಾನ್ ।
ತೇಜೋಭಿರಾಮ ಇವ ಕೇವಲಬೋಧಸೂರ್ಯಃ ॥

ಕರ್ಮೌಘಜಾಲಮುಪಸಾರ್ಯ ನಿಜಪ್ರಕಾಶಂ
ಸಂಪ್ರಾಪ್ಯ ಬೋಧಮಚಿರಾತ್ ಸುರಪೂಜಿತೋऽಭೂತ್ ॥ ೧೬ ॥

ತನ್ನ ತೀಕ್ಷ್ಣವಾದ ಕಿರಣಗಳಿಂದ ಮೇಘಮಾಲೆಯನ್ನು ಭೇದಿಸಿ ಹೊರಬಂದು ತೇಜಃಪುಂಜದಂತೆ ಬೆಳಗುವ ಸೂರ್ಯದೇವನಂತೆ ನಾಲ್ಕು ವಿಧವಾದ ಘಾತಿಕರ್ಮ ಜಾಲಗಳನ್ನು (ಜ್ಞಾನಾವರಣೀಯ, ದರ್ಶನಾವರಣೀಯ. ಮೋಹನೀಯ, ಅಂತರಾಯ) ನಾಶ(ಕ್ಷಯ) ಗೊಳಿಸಿ ತಕ್ಷಣ ಕೇವಲ ಜ್ಞಾನಪ್ರಕಾಶದಿಂದ ಜ್ಞಾನಸೂರ್ಯನಾದ ಭಗವಂತನು ಉಜ್ವಲವಾಗಿ ಬೆಳಗಿದನು. ಹಾಗೂ ದೇವಾಧಿದೇವತೆಗಳಿಂದ ಪೂಜಿಸಲ್ಪಟ್ಟನು. ಕೇವಲಜ್ಞಾನಕಲ್ಯಾಣಕ್ಕೆ ಪಾತ್ರನಾದನೆಂದು ಭಾವ.

ಜ್ಞಾನಸ್ವರೂಪ ಸುಖದರ್ಶನವೀರ್ಯಶಾಲಿನ್ ।
ತತ್ತ್ವೋಪದೇಶನ ವಿಧಾವಪಿ ಪಾರಗಾಮಿನ್ ॥
ದೇವೇಂದ್ರನಿರ್ಮಿತಸಭಾಭವನೇ ವಿಶಿಷ್ಟೇ ।
ತೀರ್ಥಂಕರತ್ವಪದವೀಂ ತ್ವಮಲಂಚಕರ್ಥ ॥ ೧೭ ॥

ಜ್ಞಾನಾವರಣೀಯಾದಿ ನಾಲ್ಕು ಪ್ರಕಾರದ ಆತ್ಮ ಘಾತಿ ಪ್ರಬಲ ಕರ್ಮಗಳ ಕ್ಷಯಮಾಡಿ ಅನಂತಜ್ಞಾನ, ಅನಂತ ದರ್ಶನ. ಅನಂತ ವೀರ್ಯ, ಅನಂತಸುಖಗಳೆಂಬ ಅನಂತ ಚತುಷ್ಟಯದಿಂದ ಶೋಭಿಸಿ ತತ್ತ್ವೋಪದೇಶ (ಓಂಕಾರ ರೂಪ) ಚತುರನಾದ ನೀನು ದೇವೇಂದ್ರನಿಂದ ಕುಬೇರನ ಮೂಲಕ ನಿರ್ಮಾಣ ಮಾಡಿಸಲ್ಪಟ್ಟ ವಿಶಿಷ್ಟ ಸಭಾಮಂದಿರದಲ್ಲಿ ತೀರ್ಥಂಕರ ಪದವಿಯನ್ನು ಅಲಂಕರಿಸಿದೆ.

ತೀರ್ಥಂ ಕರೋಷಿ ಭವಸಾಗಸಸ್ನಿಮಗ್ನಂ ।
ತೀರ್ಥಂಕರಸ್ತ್ವಮಿತಿ ಸರ್ವಜನಪ್ರಸಿದ್ಧಃ ॥
ಯಾಚೇ ಪ್ರಸೀದ! ಕರುಣಾರಸಪೂರ್ಣಸಿಂಧೋ! ।
ಮಾಂ ತಾರಯೇತಿ ಭವವಾರಿಧಿಕರ್ಣಧಾರ ! ॥ ೨೮ ॥

ಸಂಸಾರ ಸಾಗರದಲ್ಲಿ ಮುಳುಗೇಳುತ್ತಿರುವ ಭವ್ಯಪ್ರಾಣಿಗಳನ್ನು ತೀರಕ್ಕೊಯಿದು "ತೀರ್ಥಂಕರ" ಎಂಬ ಹೆಸರನ್ನು ಅನ್ವರ್ಥ (ಸಾರ್ಥಕ) ಗೊಳಿಸಿ ಸರ್ವಜನ ಪ್ರಸಿದ್ಧನಾಗಿದ್ದೀ. ಕರುಣಾರಸ ಪೂರ್ಣನಾದ ದಯಾಸಾಗರನೇ! ಭವಸಾಗರತಾರಕ (ಕರ್ಣಧಾರ)ನಾದ ನೀನು ಸಂಸಾರ ಸಮುದ್ರದಿಂದ ನನ್ನನ್ನು ಪಾರುಗೊಳಿಸಿ ಉದ್ಧರಿಸೆಂದು ಬೇಡುತ್ತೇನೆ.

ಓಂಕಾರರೂಪಸರಸಸ್ವರಸನ್ನಿಬದ್ಧಾ ।
ದಿವ್ಯಧ್ವನಿಃ ಕ್ಷರತಿ ದಿವ್ಯಮುಖಾರವಿಂದಾತ್ ॥
ತತ್ತ್ವಾರ್ಥಸನ್ನಿಹಿತಬಂಧುರ ದಿವ್ಯನಾದಂ ।
ಪ್ರೀತ್ಯಾ ಪಿಬಂತಿ ಮಧುರಂ ಮಧು ಭವ್ಯಭೃಂಗಾಃ ॥೨೯ ॥

ಓಂಕಾರವೆಂಬ ರಸಪೂರ್ಣ ಸ್ವರಸಂಯುಕ್ತವಾದ ದಿವ್ಯಧ್ವನಿಯು ನಿನ್ನ ಮುಖಕಮಲದಿಂದ ಸುರಿಯುತ್ತದೆ. ತತ್ತ್ವಾರ್ಥವನ್ನೊಳಗೊಂಡ ಆ ನಿನ್ನ ಓಂಕಾರನಾದದ ಮಧುರ ರಸವನ್ನು ಭವ್ಯರೆಂಬ ದುಂಬಿಗಳು ಪ್ರೀತಿಯಿಂದ ಹೀರಿ ಸುಖಿಸುತ್ತವೆ.

ಗಂಭೀರ ಮೇಘರವಸನ್ನಿಭದಿವ್ಯನಾದಾ ।
ನೇದುಸ್ತದಾ ದಿವಿಜದುಂದುಭಯಸ್ಸಮಂತಾತ್ ॥

ಜ್ಞಾನೋದಯಾನ್ಮುದಿತ ಸರ್ವಸುರೈಸ್ತದಾನೀಂ ।
ಪುಷ್ಪಾಣಿ ಸೌರಭಯುತಾನಿ ದಿವೋ ವವರ್ಷು: ॥ ೩೦ ॥

ಆ ಸಮಯದಲ್ಲಿ ಮೇಘಗಳ ಗಂಭೀರ ನಾದವನ್ನು ಅನುಸರಿಸುವಂತೆ ಸ್ವರ್ಗದ ದೇವದುಂದುಭಿ(ನಗಾರಿ)ಗಳು ಎಲ್ಲಾ ದಿಕ್ಕುಗಳಿಂದ ಧ್ವನಿಗೈದವು. ಭಗವಂತನಿಗೆ ಕೇವಲಜ್ಞಾನೋತ್ಪತ್ತಿಯಾದ ಶುಭಸಮಾಚಾರವನ್ನು ಕೇಳಿ ಸಂತೋಷಗೊಂಡು ದೇವತೆಗಳು ಆಕಾಶದಿಂದ ಹೂಮಳೆಗೈದರು. ಈ ಶ್ಲೋಕದಲ್ಲಿ ಭಗವಂತನ ಸುರದುಂದುಭಿ ಮತ್ತು ಸುರಪುಷ್ಪವೃಷ್ಟಿ ಪ್ರಾತಿಹಾರ್ಯಗಳು ನಿರೂಪಿತವಾಗಿವೆ.

ಹೈಮಾಚಲೇ ದ್ಯುತಿಯುತಂ ರವಿಬಿಂಬಮೀಕ್ಷ್ಯ
ಪದ್ಮಾನಿ ಮಾನಸಜಲೇ ವಿಕಸಂತಿ ಸದ್ಯ: ॥
ಸಿಂಹಾಸನೇ ಮಣಿಮಯೇ ಪ್ರಭಯಾ ಸ್ಫುರಂತಂ ।
ತ್ವಾಂ ವೀಕ್ಷ್ಯ ಭವ್ಯಕಮಲಾನಿ ಚ ಫುಲ್ಲಿತಾನಿ ॥ ೩೧ ॥

ಹಿಮಾಚಲದಲ್ಲಿ ಉದಯಿಸುವ ಪ್ರಕಾಶಮಾನನಾದ ಸೂರ್ಯನನ್ನು ಕಂಡು ಮಾನಸ ಸರೋವರದಲ್ಲಿ ಕಮಲ – ಪುಷ್ಪಗಳು ವಿಕಸಿಸುವಂತೆ ರತ್ನಖಚಿತವಾದ ಸುವರ್ಣ ಸಿಂಹಾಸನದಲ್ಲಿ ಜ್ಞಾನಜ್ಯೋತಿ ಸ್ವರೂಪನಾಗಿ ಉಜ್ವಲವಾಗಿ ಬೆಳಗುತ್ತಿರುವ ನಿನ್ನನ್ನು ಕಂಡು ಸಮವಸರಣದಲ್ಲಿರುವ ಭವ್ಯ ಜನರ ಮುಖ ಕಮಲಗಳು ಆನಂದದಿಂದ ಅರಳಿದವು. (ಈ ಶ್ಲೋಕದಲ್ಲಿ "ಸಿಹಾಸನ" ಪ್ರಾತಿಹಾರ್ಯವು ವರ್ಣಿತವಾಗಿದೆ.)

"ತ್ರಾಯಸ್ವ ದೇವ" ಇತಿಯಾಚನಯಾ ಪ್ರಸನ್ನ: ।
ಕರ್ಮಾತಪೇನ ಭುವಿಸಂದಹತಾಂ ಜನಾನಾಂ ॥

ಲೋಕತ್ರಯಾರ್ತಜನದುಃಖನಿವಾರಣಾರ್ಥಂ ।
ಛತ್ರತ್ರಯಂ ಧರಸಿ ನೂನಮಿತೀವ ಮನ್ಯೇ ॥ ೩೨ ॥

ಸ್ವಾಮಿ! ನಮ್ಮನ್ನು ಕಾಪಾಡು! ಎಂದು ಕರ್ಮದ ಕಡು ತಾಪದಿಂದ ನೊಂದು, ಬೆಂದು-ಬೆಂಡಾಗಿರುವ ಸಂಸಾರಿ ಜೀವಿಗಳ ದೀನ ಯಾಚನೆ(ಮೊರೆ) ಕೇಳಿ ಮರುಕದಿಂದ ಪ್ರಸನ್ನನಾದ ನೀನು ಮೂರೂ ಲೋಕದ ಸಂಸಾರ ತಾಪಸಂತಪ್ತರಾದ ಭವ್ಯಪ್ರಾಣಿಗಳ ರಕ್ಷಣೆಗಾಗಿಯೋ ಎಂಬಂತೆ ಮುಕ್ಕೊಡೆ(ಛತ್ರತ್ರಯ)ಯನ್ನು ಧರಿಸಿದ್ದೀ ಎಂದು ಭಾವಿಸುತ್ತೇನೆ. (ಇಲ್ಲಿ ಸ್ವಾಮಿಯ "ಛತ್ರತ್ರಯ"ವೆಂಬ ಪ್ರಾತಿಹಾರ್ಯವು ಸೂಚಿತವಾಗಿದೆ.)

ದುಗ್ಧಾಬ್ಧಿಫೇನಸಮಚಾಮರವೀಜ್ಯಮಾನಾಃ ।
ದೇವಾಃ ಸ್ತುವಂತಿ ತವ ಸುಂದರಕೀರ್ತಿಗಾಥಾಃ ॥
ಭಾಮಂಡಲಂ ದ್ಯುತಿಯುತಂ ಮುಖಮಂಡಲಸ್ಯ ।
ಜ್ಞಾನಪ್ರಕಾಶ ಇವ ಭಾತಿ ಬಹಿರ್ಗತಂ ತೇ ॥ ೩೩ ॥

ಪಾಲ್ಗಡಲ(ಕ್ಷೀರಸಾಗರ) ನೊರೆಯಂತೆ ಪರಿಶುಭ್ರವಾದ ಚಾಮರಗಳನ್ನು ಬೀಸುತ್ತ, ದೇವತೆಗಳು ನಿನ್ನ ಕೀರ್ತಿಯ ಸ್ತೋತ್ರಗಳನ್ನು ಹಾಡುತ್ತಾರೆ. ಪ್ರಭಾಮಂಡಲದ ಉಜ್ವಲಕಾಂತಿ ತುಂಬಿದ ನಿನ್ನ ಮುಖಮಂಡಲವು ಆತ್ಮನಲ್ಲಿ ಅಡಗಲು ಎಡೆಸಾಲದೆ ಹೊರಬಂದ ನಿನ್ನ ಅಮಿತವಾದ ಜ್ಞಾನಪ್ರಕಾಶವೇ ಭಾಮಂಡಲದ ರೂಪ ತಳೆದಿರಬಹುದೆಂದು ನನಗನಿಸುತ್ತಿದೆ. ಇಲ್ಲಿ ಭಗವಂತನ "ಸುರಚಾಮರ" ಮತ್ತು "ಭಾಮಂಡಲ" ಪ್ರಾತಿಹಾರ್ಯಗಳ ವರ್ಣನೆ ಮಾಡಿದೆ.)

ಶೋಕಂ ನಿವಾರಯಸಿ ದೇವ! ಜಗತ್ತ್ರಯಸ್ಯ ।
ದೇವಸ್ಯ ಶೋಕರಹಿತಸ್ಯ ಹರಾಮಿ ಶೋಕಂ ॥
ಮೂಢಸ್ತ್ವ ಶೋಕತರುರಪ್ಯುಪಗಮ್ಯ ಪಾರ್ಶ್ವಂ ।
ಇತೀವ ತಿಷ್ಠತಿ ಭವತ್ಸವಿಧೇಽನುಮನ್ಯೇ ॥ ೩೪ ॥

ಹೇ ಭಗವನ್! ನೀನು ಮೂರೂ ಲೋಕದ ಪ್ರಾಣಿಗಳ ಶೋಕ (ದುಃಖ)ವನ್ನು ದೂರ ಮಾಡುತ್ತಿ! ನಾನು ನಿನ್ನೊಬ್ಬನ ಶೋಕವನ್ನಾದರೂ ನಿವಾರಿಸಬೇಡವೇ? ಎನ್ನುವಂತೆ ಅಜ್ಞಾನಿಯಾದ ಅಶೋಕವೃಕ್ಷವು ನಿನ್ನ ಬಳಿ ನಿಂತಿದೆಯೋ ಎಂದು ನನಗೆ ಭಾಸವಾತ್ತಿದೆ.
(ಇಲ್ಲಿ "ಅಶೋಕವೃಕ್ಷ"ದ ಪ್ರಾತಿಹಾರ್ಯದ ಪ್ರತಿಧ್ವನಿ ಇದೆ.

ದೇವಾಂಗನಾ ವಿವಿಧ ಬಂಧುರ ದೇಹಕಾಂತ್ಯಾ ।
ದೇವಸ್ಯ ನಿಶ್ಚಲಮನೋ ನ ಕದಾಪಿ ವಿದ್ಧಂ ॥
ತೀವ್ರಪ್ರಭಂಜನ ಹತೋ ಭವತೀಹ ದೀಪಃ ।
ಕಿಂ ಭಾಸ್ಕರೋ ಮಲಿನತಾವಶಮಭ್ಯುಪೈತಿ? ॥ ೩೫ ॥

ದೇವತಾಸ್ತ್ರೀಯರ ಸುಂದರವಾದ ದೇಹಕಾಂತಿಯಿಂದ ಭಗವಂತನ ನಿಶ್ಚಲವಾದ ಮನಸ್ಸು ಸ್ವಲ್ಪ ಮಾತ್ರವೂ ಘಾಸಿ ಹೊಂದಲಿಲ್ಲ ತೀವ್ರವಾದ ಬಿರುಗಾಳಿಗೆ ದೀಪವು ನಂದಿಹೋಗುವಂತೆ ಸೂರ್ಯನು ನಂದಿ ಎಂದಾದರೂ ಕಂಡುವನೇ?

ಚಂದ್ರಃಕಲಂಕರಹಿತೋ ದಿವಸೇಽಪಿ ಭಾತಿ ।
ಭಾನುರ್ಹಿ ರಾತ್ರಿಸಮಯೇಽಪಿ ಸದಾ ವಿಭಾತಿ ॥

ಮೋಹಾಂಧಕಾರಮನಿಶಂ ಜಗತಃ ಪ್ರಹರ್ತಾ ।
ಏಕೋ ಭವಾನ್ ಜಗದಪೂರ್ವಶಶಾಂಕಸೂರ್ಯೌ ॥ ೩೬ ॥

ನಿಷ್ಕಲಂಕ ಚಂದ್ರನಾದ ನೀನು ಹಗಲಲ್ಲೂ ಪ್ರಕಾಶಮಾನನಾಗಿ ಬೆಳಗುತ್ತೀ, ಜ್ಞಾನಸೂರ್ಯನಾದ ನೀನು ರಾತ್ರಿಯ ವೇಳೆಯೂ ಪ್ರಕಾಶಿಸುತ್ತೀ ರಾತ್ರಿ-ಹಗಲೆಂಬ ಭೇದವಿಲ್ಲದೆ ಪ್ರಪಂಚದ ಅಜ್ಞಾನಾಂಧಕಾರವನ್ನು ದೂರಮಾಡುವುದರಿಂದ ನೀನೊಬ್ಬನೇ ಜಗತ್ತಿನ ಅಪೂರ್ವ ಚಂದ್ರ ಮತ್ತು ಸೂರ್ಯನಾಗಿದ್ದೀ.

ನೀರೋಗತಾ ಭವತು ವಾ ಮರಣಂ ಜನನಾಂ ।
ಗೃಹ್ಣಂತಿ ಶುಲ್ಕಮಥ ತೇ ಭಿಷಜೋ ಜನಾನಾಂ ॥
ಪಾರ್ಶ್ವೇಶ್ವರಸ್ತು ಜಗತಾಂ ಭವರೋಗವೈದ್ಯಃ ।
ಶುಲ್ಕಂ ವಿನಾಪ್ಯಮರತಾಂ ಖಲು ದಾಸ್ಯಸಿ ತ್ವಮ್ ॥ ೩೭ ॥

ರೋಗಿಗೆ ಆರೋಗ್ಯ ಲಭಿಸಲಿ ಅಥವಾ ಮರಣವೇ ಸಂಭವಿಸಲಿ! ಪ್ರಪಂಚದ ವೈದ್ಯರು ಇದನ್ನು ಲೆಕ್ಕಿಸದೆ ತಮ್ಮ ಫೀಸನ್ನು (ಶುಲ್ಕ) ನಿರ್ದಾಕ್ಷಿಣ್ಯವಾಗಿ ವಸೂಲು ಮಾಡುತ್ತಾರೆ. ಆದರೆ ಜಗತ್ತಿನ ಭವರೋಗ ವೈದ್ಯನಾದ ಪಾರ್ಶ್ವಪ್ರಭುವು(ನೀನು) ಶುಲ್ಕವಿಲ್ಲದೆ ಅಮರತ್ವವನ್ನೇ ನೀಡುವ ಮಹಾನ್‌ವೈದ್ಯ ಶಿರೋಮಣಿಯಾಗಿದ್ದೀ!

ಧ್ಯಾನಾನಲೇನ ಪರಮೇಣ ಚ ಶುಕ್ಲಕೇನ ।
ಚತ್ವಾರ್ಯಘಾತಿ ದುರಿತಾನ್ಯಪಿ ನಾಶಯಿತ್ವಾ ॥
ಸಂಸಾರಸಾಗರತರಂಗಮಹೋ ವಿತೀರ್ಯ ।
ಮುಕ್ತಿಂಗತೋ ದೇವನುತೋಽಂಘ್ರಿಯುಗ್ಮಃ ॥ ೩೮

ನೀನು ಪರಮ ಶುಕ್ಲಧ್ಯಾನವೆಂಬ ಬೆಂಕಿಯಿಂದ ಉಳಿದಿರುವ ಸಾತಾವೇದನೀಯ, ಆಯುಷ್ಯ, ನಾಮ ಮತ್ತು ಗೋತ್ರಗಳೆಂಬ ನಾಲ್ಕು ವಿಧವಾದ ಅಘಾತಿಕರ್ಮಗಳನ್ನೂ ನಾಶಮಾಡಿ ಸಂಸಾರವೆಂಬ ಮಹಾ ಸಾಗರದ ಪ್ರಚಂಡವಾದ ಅಲೆಗಳನ್ನು ಈಸಿ ಮೋಕ್ಷವೆಂಬ ನಿರ್ಭಯ ವಾದ ದಡವನ್ನು ಸೇರಿದೆ.

ಸರ್ಪೋಽಪಸರ್ಪತಿ ಭಿಯಾ ಸಬಲೋಽಪಿ ಶತ್ರುಃ ।
ಪಾದಾನತೋ ಭವತಿ ನೂನಮುಪೈತಿ ಲಕ್ಷ್ಮೀಃ ॥
ದುಷ್ಟಗ್ರಹೋಪಶಮನಂ ಭವತೀಹ ಸದ್ಯಃ ।
ತ್ವನ್ನಾಮಮಂತ್ರಮನಿಶಂ ಜಪತಾಂ ಜನಾನಾಮ್ ॥ ೩೯ ॥

ಹೇ ಸ್ವಾಮಿಯೇ! ಯಾವಾಗಲೂ ನಿನ್ನ ನಾಮಮಂತ್ರವನ್ನೇ ಜಪಿಸುವ ಜನರಿಗೆ ಹೆದರಿ, ಸರ್ಪವೂ ಸಹ ದೂರ ಸರಿಯುತ್ತದೆ. ಪ್ರಬಲ ಶತ್ರುವೂ ಕೂಡ ಕಾಲಿಗೆ ಬಿದ್ದರಗುತ್ತಾನೆ. ಲಕ್ಷ್ಮಿಯು ನಲಿ ನಲಿಯುತ್ತ ಒಲಿದು ಬರುತ್ತಾಳೆ. ದುಷ್ಟಗ್ರಹಗಳು ಸಹ ತಕ್ಷಣ ಉಪಶಮನ ಹೊಂದುತ್ತವೆ.

ಭೂತೋ ಬಿಭೇತಿ ವಿಪಿನೇ ಪಶವೋಽಪಿ ಹಿಂಸ್ರಾಃ ।
ಶಾಮ್ಯಂತಿ ಕಷ್ಟನಿಚಯಾಸ್ತು ಭಿಯಾ ತದಾನೀಂ ।
ದಾರಿದ್ರ್ಯದುಃಖಸಹಿತಂ ಪ್ರಲಯಂ ಪ್ರಯಾಂತಿ ॥
ತ್ವನ್ನಾಮಮಂತ್ರಮನಿಶಂ ಜಪತಾಂ ಜನಾನಾಮ್ ॥ ೪೦ ॥

ನಿನ್ನ ನಾಮಮಂತ್ರವನ್ನು ಯಾವಾಗಲೂ ಜಪಿಸುವ ಜನರಿಗೆ ಭೂತವು ಬೆದರುತ್ತದೆ. ಕಾಡಿನಲ್ಲಿ ಹಿಂಸ್ರ ಪ್ರಾಣಿಗಳು ಸಹ ಶಾಂತ

ವಾಗುತ್ತವೆ. ದಾರಿದ್ರ್ಯವೇ ಮುಂತಾದ ಸಕಲ ಸಂಕಷ್ಟಗಳೂ ದೂರ ವಾಗುತ್ತವೆ.

ದಾವಾನಲಪ್ರಬಲವಾಯುಜಲೋತ್ಥಿತಂ ವಾ ।
ದುರ್ಭಿಕ್ಷರೋಗವಿಷಜಂತುತಡಿತ್ಕೃತಂ ವಾ ॥
ನಶ್ಯತ್ಯಹೋ ಜಗತಿ ಸರ್ವವಿಧಂ ಹಿ ದುಃಖಂ ।
ತನ್ನಾಮಮಂತ್ರಮನಿಶಂ ಜಪತಾಂ ಜನಾನಾಮ್ ॥ ೪೧ ॥

ಹೇ ಪ್ರಭೋ! ಸತತವೂ ಭಕ್ತಿಯಿಂದ ನಿನ್ನ ನಾಮಮಂತ್ರ ವನ್ನು ಜಪಿಸುವ ಜನರಿಗೆ ಒದಗಬಹುದಾದ ಭಯಾನಕ ಕಾಡ್ಗಿಚ್ಚು ಪ್ರಚಂಡ ಚಂಡಮಾರುತ(ಬಿರುಗಾಳಿ) ಧಾರಾಕಾರವಾಗಿ ನಿರಂತರ ಸುರಿವ ಜಡಿಮಳೆ, ವಿನಾಶಕಾರಿ ಸಿಡಿಲಿನ ಹೊಡೆತ ಮುಂತಾದ ಸರ್ವ ಪ್ರಕಾರದ ದುಃಖ-ಸಂಕಷ್ಟಗಳು ನಿಶ್ಚಯವಾಗಿ ದೂರವಾಗುವವು.

ಅಜ್ಞೋ ಬುಧೋ ಭವತಿ, ಭಕ್ತಿಬಲಾನ್ಮುನೀಶ ! ।
ರೋಗೀ ಸದಾ ಭವತಿ ರೋಗವಿಮುಕ್ತದೇಹೋ ॥
ಮೂಕೋ ಗಿರೋ ವದತಿ ಪಶ್ಯತಿ ಸಮ್ಯಗಂಧಃ ।
ಪಂಗುಶ್ಚಲಂಘತಿ ಗಿರಿಂ ಸುಖತೋ ಮಹಾಂತಮ್ ॥ ೪೨ ॥

ಎಲೇ ಸ್ವಾಮಿ! ನಿನ್ನ ದೃಢವಾದ ಭಕ್ತಿಯ ಬಲವಿದ್ದರೆ ಅಜ್ಞಾನಿಯು ಸುಜ್ಞಾನಿಯಾಗುತ್ತಾನೆ. ರೋಗಿಯು ರೋಗಮುಕ್ತನಾಗುತ್ತಾನೆ. ಮೂಕನು ಮಾತನಾಡಲು ಸಮರ್ಥನಾಗುತ್ತಾನೆ. ಕುರುಡನೂ ನೋಡತೊಡಗುತ್ತಾನೆ. ಹೆಳವ(ಕಾಲಿಲ್ಲದ ಕುಂಟ)ನೂ ಸಹ ದೊಡ್ಡ ಬೆಟ್ಟವನ್ನೇ ದಾಟಬಲ್ಲನನಾಗುತ್ತಾನೆ. (ನಿನ್ನ ಮಹಿಮೆ ಅಚಿಂತ್ಯವಾದುದು.)

ಚಿಂತಾಮಣಿಸ್ತ್ವಮಸಿ ಚಿಂತಿತವಸ್ತುದಾನಾತ್ ।
ಕಲ್ಪದ್ರುಮೋಽಸಿ ಜನಕಲ್ಪಿತದಾನಶೀಲಾತ್ ॥
ನಿರ್ವ್ಯಾಜಬಂಧುರಸಿ ಭವ್ಯಜನಾನುರಾಗೀ! ।
ಘೋರೋಪಸರ್ಗ ವಿಜಯಿನ್ ವಿಭುಪಾರ್ಶ್ವನಾಥ ! ॥ ೪೩ ॥

ಕಮಠಾಸುರನ ಘೋರೋಪಸರ್ಗವನ್ನು ಜಯಿಸಿದ ಪಾರ್ಶ್ವನಾಥ ಪ್ರಭುವೇ! ನೀನು ಜನರಿಗೆ ಇಚ್ಛಿತ ವಸ್ತುವನ್ನು ನೀಡಬಲ್ಲ ಚಿಂತಾಮಣಿ ರತ್ನವಾಗಿದ್ದಿ! ಮನಸ್ಸಿನಲ್ಲಿ ಕಲ್ಪಿಸುವ ವಸ್ತುಗಳನ್ನು ದಾನ ಮಾಡುವುದರಿಂದ ಕಲ್ಪವೃಕ್ಷದಂತಿದ್ದಿ, ಭವ್ಯ ಜನಾನುರಾಗಿಯಾದ ನೀನು ನಿಜವಾಗಿ ಭಕ್ತರ ಸಹಜ ಬಂಧುವಾಗಿದ್ದಿ.

ಭೇತ್ತಾಸಿ ಕರ್ಮಪರುಷಸ್ಯ ಮಹೀಧರಸ್ಯ ।
ಜ್ಞಾತಾಸಿ ವಿಶ್ವಗತಸರ್ವಚರಾಚರಾಣಾಂ ॥
ನೇತಾಸಿ ಮುಕ್ತಿಪಥಸಂಚರತಾಂ ಜನಾನಾಂ ।
ಮೋಕ್ಷಾರ್ಥಿನೋ ಭುವಿ ಭವಂತಮುಪಾಶ್ರಯಂತೇ॥ ೪೪ ॥

ಹೇ ಪ್ರಭೋ! ನೀನು ಕಠಿನವಾದ ಕರ್ಮ ಪರ್ವತವನ್ನು ಭೇದಿಸಿರುತ್ತಿ! ಮೂರೂ ಲೋಕದ ಸಮಸ್ತ ಚರಾಚರ ವಸ್ತುಗಳನ್ನು ಅರಿಯಬಲ್ಲ ಸರ್ವಜ್ಞನಾಗಿದ್ದಿ! ಮೋಕ್ಷಮಾರ್ಗದಲ್ಲಿ ಸಂಚರಿ ಮುಮುಕ್ಷುಗಳಿಗೆ ಮಾರ್ಗದರ್ಶಕನಾಗಿದ್ದೀ! ಆದುದರಿಂದ ಲೋಕದಲ್ಲಿ ಮೋಕ್ಷಾಭಿಲಾಷಿಗಳು ನಿನ್ನನ್ನು ಆಶ್ರಯಿಸುತ್ತಾರೆ.

ಬುದ್ಧಃ ಸ್ವಬೋಧ ಮುಕುರೇ ಪ್ರತಿಬಿಂಬಿತಾರ್ಥೋ ।
ವಿಷ್ಣುಸ್ತ್ವಮೇವ ದಯಯಾಶ್ರಿತರಕ್ಷಕೋಽಸಿ ॥

ಕರ್ಮಾರಿಸಂಹನನತೋ ಹರ ಏವ ನೂನಂ ।
ವ್ಯರ್ಥಂ ಜನಾಃ ಪರಮತಂ ಕಿಲ ವಿದ್ವಿಷಂತಿ॥ ॥ ೪೫ ॥

ಹೇ ಸ್ವಾಮೀ! ನಿಮ್ಮ ಕೇವಲ ಜ್ಞಾನರೂಪೀ ದರ್ಪಣ(ಕನ್ನಡಿ) ದಲ್ಲಿ ಲೋಕದ ಸಮಸ್ತ ವಸ್ತುಗಳು ಪ್ರತಿಬಿಂಬಿಸಿ ಗೋಚರಿಸುವುದ-ರಿಂದ ನೀನು "ಬುದ್ಧ"ನಾಗಿದ್ದಿ! ಕರುಣಾಳುವಾದ ನೀನು ನಿನ್ನನ್ನು ಆಶ್ರಯಿಸುವ ಭಕ್ತಜನರನ್ನು ಸಂಸಾರ ದುಃಖದಿಂದ ಸಂರಕ್ಷಿಸುವುದರಿಂದ "ವಿಷ್ಣು"ವಾಗಿದ್ದಿ! ಕರ್ಮಗಳೆಂಬ ವೈರಿಗಳನ್ನು ನಾಶ ಮಾಡಿರುವುದರಿಂದ ನೀನೇ "ಹರ". ಜನರು ವ್ಯರ್ಥವಾಗಿ ಪರಮತವನ್ನು ದ್ವೇಷಿಸುತ್ತಾರೆ. (ಇದು ಸರಿಯಲ್ಲ)

ತ್ವಂ ನಾವಿಕೋऽಸಿ ಭವಸಿಂಧುಪತಜ್ಜನಾನಾಂ ।
ತ್ವಂ ನಾಯಕೋऽಸಿ ಜಿನ! ಮುಕ್ತಿಪಥಾಶ್ರಿತಾನಾಂ ॥
ತ್ವಂ ದೀನಬಂಧುರಸಿ ಸರ್ವಹಿತಂಕರೋऽಸಿ ।
ತ್ವಾಮೇವ ಪಾರ್ಶ್ವ! ಸತತಂ ಶರಣಂ ವ್ರಜಾಮಿ ॥ ೪೬ ॥

ಸ್ವಾಮಿಯೇ! ನೀನು ಸಂಸಾರ ಜಲಧಿ(ಸಮುದ್ರ)ಯಲ್ಲಿ ಮುಳು-ಗುತ್ತಿರುವ ಜನರನ್ನು ಮೇಲೆತ್ತಿ ಕಾಪಾಡುವ ನಾವಿಕ(ದೋಣಿಗ)ನಾಗಿದ್ದೀ ಮುಕ್ತಿಮಾರ್ಗ ನಿರತರಿಗೆ ದಾರಿ ತೋರಿಸುವ ಮಹಾನಾಯಕನಾಗಿದ್ದೀ! ದೀನ ಜನರ ಬಂಧುವೂ, ಸರ್ವಪ್ರಾಣಿಗಳ ಹಿತೈಷಿಯೂ ಆಗಿದ್ದೀ. ಆದುದರಿಂದ ನಾನು ಸದಾ ನಿನ್ನ ಶರಣಾಗತನಾಗಿದ್ದೇನೆ.

ದೇವೇಂದ್ರವೃಂದ ಪರಿವಂದಿತ ದಿವ್ಯಪಾದಂ ।
ಯೋಗೀಂದ್ರಯೋಗಪರಿಭಾವಿತಬೋಧರೂಪಂ ॥

ರಾಜೇಂದ್ರರಾಜಿಮೃಗರಾಜಶರಣ್ಯಭೂತಂ ।
ತ್ವಾಮೇವ ಪಾರ್ಶ್ವ! ಸತತಂ ಶರಣಂ ಪ್ರಜಾಮಿ ॥ ೪೭ ॥

ಹೇ ದೇವ! ದೇವೇಂದ್ರರ ಸಮೂಹದಿಂದ ವಂದಿಸಲ್ಪಡುವ ಚರಣಕಮಲಗಳುಳ್ಳವನೂ, ಮಹರ್ಷಿಗಳ ದಿವ್ಯಯೋಗ(ಧ್ಯಾನ)ದಲ್ಲಿ ಶುದ್ಧಜ್ಞಾಯಕ ಸ್ವರೂಪಿಯಾಗಿ ದರ್ಶನವೀಯುವವನೂ, ಚಕ್ರವರ್ತಿ ಮೊದಲಾದ ರಾಜಾಧಿರಾಜರ ಹಾಗೂ ಸಿಂಹವೇ ಮೊದಲಾದ ಮೃಗ-ರಾಜರ ಸಾಲುಗಳಿಂದ ಕಂಗೊಳಿಸುವ ಸಮವಸರಣದಲ್ಲಿ ಶೋಭಿಸುವವನೂ ಆಗಿರುವುದರಿಂದ ನೀನು ಸರ್ವರಿಗೂ ಶರಣ್ಯಭೂತನಾಗಿದ್ದೀ ನಾನು ಸದಾ ನಿನ್ನ ಶರಣಾಗತನಾಗಿದ್ದೇನೆ.

ಸ್ತೋತ್ರಂ ವಿರಚ್ಯ ಜಿನಪಸ್ಯ ತು"ಭಾಲಪಾಲಃ" ।
ಪಾರ್ಶ್ವೇಶ್ವರಸ್ಯ ಪದಪಂಕಜಚಂಚರೀಕಃ ॥
ಭಕ್ತ್ಯಾ ಸಮರ್ಪ್ಯ ಜಿನಪಾದಯುಗೇಽಹಮತ್ರ ।
ತ್ವಾಮೇವ ಪಾರ್ಶ್ವ! ಸತತಂ ಶರಣಂ ಪ್ರಜಾಮಿ ॥ ೪೮ ॥

ಪಾರ್ಶ್ವಜಿನೇಂದ್ರನ ಚರಣಕಮಲದ ಚಂಚರಿಕೇ(ದುಂಬಿ) ನಾದ "ಬಾಲಪಾಲ" (ಶಿಶುಪಾಲ) ಎಂಬ ಕಾವ್ಯನಾಮವನ್ನು ಹೊಂದಿರುವ ನಾನು ಭಕ್ತಿಯಿಂದ ಪಾರ್ಶ್ವನಾಥಸ್ವಾಮಿಯ ಸ್ತೋತ್ರವನ್ನು ರಚಿಸಿ ಆ ಜಿನೇಂದ್ರರ ಪಾದಯುಗಲದಲ್ಲಿ ಅದನ್ನು ಅರ್ಪಿಸಿ ಸರ್ವ ಶರಣ್ಯ ಭೂತನಾದ ಆ ಪ್ರಭುವಿಗೆ ಶರಣಾಗತನಾಗಿದ್ದೇನೆ.

—: ಓಂ :—

**ಸಮಾರೋಪ:**

ಸ್ತೋತ್ರಂ ಹಿ ಭಕ್ತಾಮರಪಾರ್ಶ್ವನಾಥಂ ।
ಚಿಂತಾಮಣಿಂ ರತ್ನಮಚಿಂತ್ಯಶಕ್ತಿಂ ॥
ಕಂಠೇ ದಧನ್ "ಬಾಲಕಪಾಲ" ಪೂಜ್ಯಂ ।
ಪ್ರಾಪ್ನೋತಿ ಭಕ್ತೋ ನನುಚಿಂತಿತಾರ್ಥಮ್ ॥

"ಬಾಲಪಾಲ" ಕವಿಯಿಂದ ರಚಿತವಾದ ಪರಮ ಪವಿತ್ರವಾದ ಈ "ಭಕ್ತಾಮರ-ಪಾರ್ಶ್ವನಾಥ"ವೆಂಬ ಚಿಂತಾಮಣಿ ರತ್ನವು ಅಚಿಂತ್ಯ ಶಕ್ತಿಯುಳ್ಳುದಾಗಿದೆ. ಈ ಚಿಂತಾಮಣಿ ರತ್ನವನ್ನು ಕಂಠದಲ್ಲಿ ಧರಿಸುವ ಅಂದರೆ ಕಂಠಪಾಠ ಮಾಡುವ ಭಕ್ತನು ನಿಜವಾಗಿ ತನ್ನ ಇಷ್ಟಾರ್ಥವನ್ನು ಪಡೆಯುತ್ತಾನೆ.

## ಶ್ರೀ ಪದ್ಮಾವತೀ — ಪಂಚಕಮ್

### (ಶಾರ್ದೂಲ ವಿಕ್ರೀಡಿತ)

ಕ್ಷೇತ್ರೇ "ಹೊಂಬುಜ" ನಾಮಕೇ ಸುಮಹಿತೇ
ದೇವೇಂದ್ರಕೀರ್ತ್ಯರ್ಚಿತೇ ।
ಭಕ್ತಾನಾಂ ವರದೇ ಸರೋಜನಯನೇ ಪದ್ಮಪ್ರಭೇ ವತ್ಸಲೇ ॥
ಯಾಚೇऽಹಂ ಕವಿಬಾಲಪಾಲಮಹಿತೇ ಧರ್ಮಸ್ಯ ಸಂರಕ್ಷಿಣಿ ।
ಶ್ರೀ ಮತ್ಪಾರ್ಶ್ವಜಿನೇಶ್ವರೈಕಶರಣೇ ಪದ್ಮಾಂಬಿಕೇ
ಪಾಹಿ ಮಾಮ್ ॥ ೧ ॥

**ಭಾವ:** ಸುಪ್ರಸಿದ್ಧವಾದ "ಹೊಂಬುಜ"ವೆಂಬ ಕ್ಷೇತ್ರದಲ್ಲಿ ಶ್ರೀ ದೇವೇಂದ್ರಕೀರ್ತಿಗಳೆಂಬ ಭಟ್ಟಾರಕರಿಂದ ಪೂಜಿಸಲ್ಪಡುವ ಭಕ್ತ ಜನರಿಗೆ ಇಷ್ಟಾರ್ಥ(ವರ)ಗಳನ್ನು ನೀಡುವ ತಾವರೆಯಂತೆ, ಕಂಗ-

ಳುಳ್ಳ ಕಮಲದ ಹೂವಿನಂತೆ ರಮಣೀಯವಾದ ಕಾಂತಿಯಿಂದ ಕೂಡಿದ ವಾತ್ಸಲ್ಯಮಯಿಯಾದ "ಶಿಶುಪಾಲ"ನಿಂದ ನಮಿಸಲ್ಪಡುವ ಚರಣಗಳುಳ್ಳ ಧರ್ಮಸಂರಕ್ಷಕಳಾದ ಶ್ರೀ ಪಾರ್ಶ್ವನಾಥ ಜಿನೇಂದ್ರನ ಪರಮಭಕ್ತ(ಶರಣಾಗತ) ಳಾದ ಅಮ್ಮಾ ಪದ್ಮಾಂಬಿಕೆಯೇ! ನನ್ನನ್ನು ಕಾಪಾಡೆಂದು ಪ್ರಾರ್ಥಿಸುವೆನು.

ಸಾಕಾರಸ್ಯ ನರೇಶ್ವರಸ್ಯ ತನುಜೋ ರಾಜ್ಯಾತ್ಪರಿವ್ರಾಜಿತಃ ।
ಕಾಂತಾರೇ ಜಿನದತ್ತನಾಮ ಸುಭಗಃ ಪ್ರೇಮ್ಣಾ ತ್ವಯಾ ರಕ್ಷಿತಃ ॥
ಸ್ನೇಹಾತ್ತತ್ರ ವನೌಕಸೋ ನಿಜನೃಪಂ ವ್ಯಾಥಂ ಚ ತೇ ಚಕ್ರಿರೇ ।
ಶ್ರೀ ಮತ್ಪಾರ್ಶ್ವಜಿನೇಶ್ವರೈಕಶರಣೇ ಪದ್ಮಾಂಬಿಕೇ
ಪಾಹಿ ಮಾಮ್ ॥ ೨ ॥

**ಭಾವ:** ಸಾಕಾರರಾಯ (ಉತ್ತರ ಮಧುರೆಯ ರಾಜ) ನ ಸುಂದರ ಸುಕುಮಾರನಾದ ಜಿನದತ್ತನೆಂಬ ರಾಜಕುಮಾರನು ಸವತಿ ತಾಯಿಯ ದುಷ್ಟ ಪ್ರೇರಣೆಯ ಮೂಲಕ ರಾಜ್ಯದಿಂದ ನಿರ್ವಾಸಿತ (ಹೊರಹಾಕು)ನಾದಾಗ ಅವನನ್ನು ಕೊಲ್ಲುವ ದುರುದ್ದೇಶದಿಂದ ಶತ್ರುಗಳು ಬೆನ್ನಟ್ಟಿ ಧಾವಿಸಿ ಬಂದಾಗ ಕಾಡಿನಲ್ಲಿ ಅವನನ್ನು ನೀನು ಪ್ರೀತಿಯಿಂದ ಕಾಪಾಡಿದೆ. ಕಾಡಿನ ಬೇಡರೆಲ್ಲ ಅವನ ಸ್ನೇಹವನ್ನು ಬೆಳೆಸಿ ಕಾಡನ್ನು ನಾಡಾಗಿಸಿ, ಅವನಿಗೆ ರಾಜ್ಯಕಟ್ಟಿ, ಪಟ್ಟಾಭಿಷೇಕ ಹಾಗೂ ವಿವಾಹವನ್ನು ಮಾಡಿದರು. ಶ್ರೀ ಪಾರ್ಶ್ವನಾಥ ಸ್ವಾಮಿಯ ಶರಣಾಗತಳಾದ ತಾಯೇ! ಪದ್ಮಾಂಬಿಕೆಯೇ! ನನ್ನನ್ನು ಕಾಪಾಡೆಂದು ಪ್ರಾರ್ಥಿಸುವೆನು.

ಕಾಸಾರೇ ಚ ಪರೀಕ್ಷಿತುಂ ನರಪತಿಂ ಮುಕ್ತಾಫಲೇ ನಿರ್ಮಿತೇ ।
ಮೋಹಾತ್ ಪಂಚಮ ಕಾಲದೋಷನಿಹತಃ ಪತ್ನೀವಶಂ ಸಂಗತಃ ॥

ಭಾರ್ಯಾಯೈ ವರಮೇವ ಮೌಕ್ತಿಕಮಹೋ ಚಿನ್ವನ್,
ದದೌ, ತದ್ದ್ವಯೋಃ ।
ಶ್ರೀ ಮತ್ಪಾರ್ಶ್ವಜಿನೇಶ್ವರೈಕ ಶರಣೇ ಪದ್ಮಾಂಬಿಕೇ
ಪಾಹಿ ಮಾಮ್ ॥ ೩ ॥

**ಭಾವ:** ನೂತನವಾಗಿ ಕಾಡಿನ ರಾಜ್ಯಾಭಿಷಿಕ್ತ ಹಾಗೂ ವಿವಾಹಿತನಾದ ಜಿನದತ್ತರಾಜನ ಭಕ್ತಿ ಪರೀಕ್ಷೆಗಾಗಿ ನೀನು ಅಲ್ಲಿದ್ದ ಸರೋವರ (ಮುತ್ತಿನಕೆರೆ)ದಲ್ಲಿ ಎರಡು ಮುತ್ತುಗಳನ್ನು ನಿರ್ಮಿಸಿದೆ. ಒಂದು ಜಾತಿ ಮುತ್ತು, ಇನ್ನೊಂದು ಬಟ್ಟ ಮುತ್ತು. ಪಂಚಮ ಕಾಲದೋಷದಿಂದ ಹೆಂಡತಿಯ ವಶವರ್ತಿಯಾಗಿ ಮೋಹಪಾಶಕ್ಕೆ ಸಿಕ್ಕಿ ಮೂಢನಾದ ಜಿನದತ್ತನು ಆ ಎರಡು ಮುತ್ತುಗಳಲ್ಲಿ ಶ್ರೇಷ್ಠವಾದ ಜಾತಿ ಮುತ್ತನ್ನೇ ಹೆಂಡತಿಗೆ ಪ್ರೇಮದ ಕಾಣಿಕೆಯಾಗಿತ್ತನು. ಬಟ್ಟ ಮುತ್ತನ್ನು ದೇವಿಗೆ ಒಪ್ಪಿಸಿದನು.

ಪಾರ್ಶ್ವ ಪ್ರಭುವಿನ ಶರಣಾಗತಳಾದ ತಾಯೇ ಪದ್ಮಾಂಬೇ! ನನ್ನನ್ನು ಕಾಯೆಂದು ನಿನ್ನ ನಾ ಬೇಡುವೆನು.

ತಂ ದೃಷ್ಟ್ವಾ ವಿರತಾ ತದೈವ ಜನನೀ ಕೂಪೇ ವಿಲೀನಂ ಗತಾ ।
ಪಶ್ಚಾತ್ತಾಪಯುತೇನ ರುದತಾ ದತ್ತೇನ ಸಂಪ್ರಾರ್ಥಿತಾ ॥
ತಸ್ಮೈ ತ್ವಂ ಕರುಣಾರಸೈಕನಿಲಯೇ! ದತ್ವಾಭಯಂ ಶೋಭಸೇ ।
ಶ್ರೀ ಮತ್ಪಾರ್ಶ್ವಜಿನೇಶ್ವರೈಕ ಶರಣೇ ಪದ್ಮಾಂಬಿಕೇ
ಪಾಹಿ ಮಾಮ್ ॥ ೪ ॥

**ಭಾವ:** ಪತ್ನೀ ಮೋಹದಿಂದ ಭಕ್ತಿಚ್ಯುತನಾದುದನ್ನು ಕಂಡು ಜಗದಂಬೆಯು ರಸಭಾವಿಯಲ್ಲಿ ವಿಲೀನ(ಮಾಯ)ವಾದಳು. ನಂತರ

ತಾನು ಮಾಡಿದ ತಪ್ಪಿನ ಅರಿವಾಗಿ ಪಶ್ಚಾತ್ತಾಪದಿಂದ ಅಳುತ್ತಾ ಪದ್ಮಾಂಬೆಯನ್ನು ಪರಿಪರಿಯಿಂದ ಬೇಡಿಕೊಂಡಾಗ ದಯಾಸಾಗರಳಾದ ನೀನು ಸ್ವಪ್ನದಲ್ಲಿ ಆವಿಷ್ಕರಿಸಿ ಇಲ್ಲೇ ನೆಲೆಸುವೆನೆಂದು ಅವನಿಗೆ ಅಭಯ ನೀಡಿದ ಮೇಲೆ ಇಲ್ಲೇ (ಹೊಂಬುಜ) ಶೋಭಿಸುತ್ತಿದ್ದೀಯೆ! ಶ್ರೀ ಪಾರ್ಶ್ವನಾಥ ಪ್ರಭುವಿನ ಶರಣಾಗತಳಾದ ತಾಯೇ ಪದ್ಮಾಂಬಿಕೆಯೇ! ನನ್ನನ್ನು ಕಾಪಾಡು.

ಭಕ್ತ್ಯಾ ತೇನ ವಿನಿರ್ಮಿತೇ ಜಿನಗೃಹೇ ದೇವೀ ಪ್ರತಿಷ್ಠಾಪಿತಾ ।
ಕಾಂತಾರಂ ನಗರೀಕೃತಂ ತದಧುನಾ ಭಟ್ಟಾರಕೈಸ್ಸಶ್ರಮಂ ॥
ಇತ್ಥಂ ದಾಸ್ಯಸಿ ಭಕ್ತವಾಂಛಿತಫಲಂ ಭೂಕಲ್ಪವಲ್ಲೀ ಶ್ರುತಾ ।
ಶ್ರೀ ಮತ್ಪಾರ್ಶ್ವಜಿನೇಶ್ವರೈಕಶರಣೇ ಪದ್ಮಾಂಬಿಕೇ
ಪಾಹಿ ಮಾಮ್ ॥ ೫ ॥

**ಭಾವ:** ಅನಂತರ ಭಕ್ತಿಯಿಂದ ಆ ಜಿನದತ್ತನು ನಿರ್ಮಾಣಗೊಳಿಸಿದ ಜಿನಮಂದಿರದಲ್ಲಿ ಸಂಪ್ರೀತಳಾಗಿ ಪ್ರತಿಷ್ಠಾಪಿಸಲ್ಪಟ್ಟೆ. ಶ್ರೀ ದೇವೇಂದ್ರಕೀರ್ತಿ ಭಟ್ಟಾರಕರ ಸತತ ಪರಿಶ್ರಮದಿಂದ ಇಂದು ಆ ಕಾಡು ನಾಡಾಯಿತು. ಹೀಗೆ ಭಕ್ತ ಜನರಿಗೆ ಇಚ್ಛಿತ ಫಲವನ್ನು ನೀಡುತ್ತಿರುವ ನೀನು ಭೂಲೋಕದ ಕಲ್ಪಲತೆಯೆಂದು ಪ್ರಸಿದ್ಧಿಯನ್ನು ಹೊಂದಿರುವೆ. ಪಾರ್ಶ್ವಜಿನೇಂದ್ರನ ಪರಮ ಭಕ್ತಳಾದ ತಾಯೇ ಪದ್ಮಾಂಬೇ! ನನ್ನನ್ನು ಸದಾ ರಕ್ಷಿಸೆಂದು ನಿನ್ನನ್ನು ಪ್ರಾರ್ಥಿಸುವೆ.

—: ಓಂ :—

**ಸಮಾರೋಪ :**

ಭಕ್ತ್ಯಾ ಪದ್ಮಾವತೀಸ್ತೋತ್ರಂ ಯಃ ಪಠೇದಿಹ ಮಾನವಃ ।
ಕ್ರಮಶಃ ಪುಣ್ಯಮಾಸಾದ್ಯ ಮುಕ್ತಿಲಕ್ಷ್ಮೀಂ ವ್ರಜೇತ್ಫಲು ॥

ಈ ಪದ್ಮಾವತೀ ಸ್ತೋತ್ರವನ್ನು ಭಕ್ತಿಯಿಂದ ಓದುವ ಮಾನವನು ಕ್ರಮವಾಗಿ ಪುಣ್ಯಾರ್ಜನೆಗೈದು ಮುಂದೆ ಮೋಕ್ಷ ಲಕ್ಷ್ಮಿಯನ್ನು ಪಡೆಯುವನು.

—: ಓಂ :—

# ಅಕ್ಷರಮಾಲಿಕಾ — ಸ್ತೋತ್ರಮ್

## (" ಬಾಲಪಾಲ " — ವಿರಚಿತಮ್)

ಅಕ್ಷಯಂ ಮೋಕ್ಷ-ಲಕ್ಷ್ಮೀಶಂ ಅಕ್ಷಯಾನಂದ-ಸಾಗರಂ ।
ಅಕ್ಷಯ ಜ್ಞಾನ ಸಂಪನ್ನಂ ಅಂಚಾಮ್ಯಕ್ಷರಮಾಲಯಾ ॥ ೧ ॥

**ಭಾವ :** ಅವಿನಾಶನೂ, ಮೋಕ್ಷ-ಲಕ್ಷ್ಮಿಗೊಡೆಯನೂ, ಅಕ್ಷಯವಾದ ಆತ್ಮಾನಂದಕ್ಕೆ ಸಾಗರ-ಸ್ವರೂಪನೂ, ಅನಂತ ಜ್ಞಾನ ಸಂಪನ್ನನೂ ಆಗಿರುವ ಪರಮಾತ್ಮನನ್ನು ಅಕ್ಷರಗಳ ಮಾಲೆಯಿಂದ ಅರ್ಚಿಸುತ್ತೇನೆ.

ಅಜಿತಂ ಜಿತಕರ್ಮಾಘಂ ಜಿತಮೋಹಭಟಂ ಜಿನಂ ।
ಅನಂತಂ ಮನಸಾ ವಂದೇ ಚಾನಂತ ಬಲ ಶಾಲಿನಂ ॥ ೨ ॥

ಸಾಮಾನ್ಯರಿಂದ ಗೆಲ್ಲಲಾಗದ ಕರ್ಮಸಮೂಹವನ್ನು ಗೆದ್ದಿರುವ, ಪ್ರಬಲವಾದ ಮೋಹಭಟನನ್ನು ಜಯಿಸಿ, ಜಿನನೆಂದು ಪ್ರಸಿದ್ಧಿಪಡೆದ, ಅನಂತವೀರ್ಯರಾದ, ಅನಂತನಾಥ ಜಿನರನ್ನು ಮನಃಪೂರ್ವಕವಾಗಿ ವಂದಿಸುತ್ತೇನೆ.

**ಆದಿತ್ಯ ಇವ ಲೋಕಸ್ಯ ಮಿಥ್ಯಾತ್ವಾಂಧತಮೋಹರ! ।**
ಅನಮ್ಯ ಭಗವನ್! ಯಾಚೇ ಮಮಾಜ್ಞಾನಂ ವಿನಾಶಯ! ॥ ೩ ॥

ಸೂರ್ಯನು ತನ್ನ ಕಿರಣಗಳಿಂದ ಲೋಕದ ಕತ್ತಲೆಯನ್ನು ಕತ್ತರಿಸುವಂತೆ ಜನರಲ್ಲಡಗಿರುವ ಮಿಥ್ಯಾತ್ವ (ಅಜ್ಞಾನ)ವೆಂಬ ಗಾಢಾಂಧಕಾರವನ್ನು ದೂರ ಮಾಡಿದ ಸ್ವಾಮಿಯೇ! ನನ್ನ ಅಜ್ಞಾನವನ್ನು ನಾಶ ಮಾಡೆಂದು ತಲೆಬಾಗಿ ಬೇಡುತ್ತೇನೆ.

ಇಷ್ಟೋಪದೇಶಿನಂ ದುಷ್ಟಕರ್ಮಣಾಂ ದರ್ಪಮರ್ದನಂ ।
ಇಲಾವಂದ್ಯಂ ಚ ಸರ್ವಜ್ಞಂ ಭಜೇಽಹಂ ತದ್ಗುಣಾಪ್ತಯೇ ॥ ೪ ॥

ಭವ್ಯರಿಗಿಷ್ಟವಾದ ಧರ್ಮೋಪದೇಶವನ್ನು ಮಾಡಿದ ದುಷ್ಟಘಾತಿ ಕರ್ಮಗಳ ದರ್ಪವನ್ನು ಮುರಿದಿಕ್ಕಿದ ಲೋಕವಂದ್ಯನಾದ ಸರ್ವಜ್ಞನನ್ನು ಅವನ ಅನುಪಮಗುಣಗಳ ಪ್ರಾಪ್ತಿಗಾಗಿ ನಾನು ಸ್ತುತಿಸುತ್ತೇನೆ.

**ಈಶ್ವರಃ ಸುಗತೋ ವಿಷ್ಣುಃ ಸನ್ಮತಿಃ ಕಮಲಾಸನಃ ।**
ಈದೃಶೈರ್ನಾಮಭಿರ್ನಿತ್ಯಂ ನರೈಃ ಸಂಬೋಧ್ಯತೇ ಭವಾನ್ ॥ ೫ ॥

ಈಶ್ವರ, ಬುದ್ಧ, ವಿಷ್ಣು, ಸನ್ಮತಿ, ಬ್ರಹ್ಮ ಎಂಬೀ ನಾನಾ ಹೆಸರುಗಳ ಮೂಲಕ ನೀನು ಜನರಿಂದ ಸಂಬೋಧಿಸಲ್ಪಡುತ್ತೀ. ಆದರೆ ನೀನು ಬೇರೆ ಬೇರೆ ಅಲ್ಲ, ಒಬ್ಬನೇ ಆಗಿರುವೆ.

ಉನ್ನತಂ ಮುಕ್ತಿಸೌಧಂ ಹಿ ಪ್ರಾಪ್ಯ ತತ್ರ ವಿರಾಜಸೇ ।
ಉಷ್ಣರಶ್ಮಿರಿವಾಕಾಶೇ ಭ್ರಾಜಸೇ ಭಕ್ತಬಾಂಧವ! ॥ ೬ ॥

ಅತೀವ ಉನ್ನತವಾದ ಮುಕ್ತಿಯೆಂಬ ಮಹಲಿನ ಮಹಡಿಯ ನ್ನೇರಿ ಅಲ್ಲಿ ಭಕ್ತಬಾಂಧವನಾದ ನೀನು ಗಗನ ಸೌಧದ ಶಿಖರದಲ್ಲಿ ದಿನಮಣಿ (ಸೂರ್ಯ)ಯಂತೆ ಪ್ರಕಾಶಮಾನನಾಗಿ ಶೋಭಿಸುತ್ತಿರುವೆ.

ಊರ್ಧ್ವಲೋಕಾಗ್ರ ಭಾಗಸ್ಥಂ ಊರ್ಧ್ವಲೋಕಶಿರೋಮಣಿಂ ।
ಊಹಾತೀತಗುಣಂ ಭಕ್ತ್ಯಾ ಸ್ಮರಾಮಿ ಸತತಂ ಹೃದಿ ॥ ೭ ॥

ಊರ್ಧ್ವಲೋಕದ ಅಗ್ರಭಾಗ (ಮೇಲ್ಭಾಗ)ದಲ್ಲಿ ಶಿರೋಮಣಿ (ಮಸ್ತಕರತ್ನ)ಯಂತೆ ಶೋಭಿಸುವ, ಊಹೆಗೆ ನಿಲುಕದ ಅಮೋಘ ಗುಣಗಳಿಂದ ಕೂಡಿದ ಭಗವಂತನನ್ನು ಯಾವಾಗಲೂ ಹೃದಯದಲ್ಲಿ ಭಕ್ತಿಯಿಂದ ಸ್ಮರಿಸುತ್ತೇನೆ.

ಋಷಭಾದಿ-ಜಿನೇಂದ್ರಾಣಾಂ ಉಪದೇಶಾನುಸಾರಿಭಿಃ ।
ಋಷಿಭಿರ್ಮನಸಾ ಧ್ಯಾತ್ವಾ ಮುಕ್ತಿಲಕ್ಷ್ಮೀರ್ವಶೀಕೃತಾ ॥ ೮ ॥

ಶ್ರೀ ಆದಿನಾಥರಿಂದ ಆದಿಯಾಗಿ ವರ್ಧಮಾನರ ವರೆಗಿನ ತೀರ್ಥಂಕರ ಪರಮದೇವರ ದಿವ್ಯವಾಣಿಯ ಅನುಸಾರ ಋಷಿಪುಂಗ ವರು ಧ್ಯಾನಗೈದು ಮೋಕ್ಷಲಕ್ಷ್ಮಿಯನ್ನು ವಶಮಾಡಿಕೊಂಡರು.

ದೇವೇಂದ್ರಕೀರ್ತಿನಾ ಭಕ್ತ್ಯಾ ನುತಪಾದಪಯೋರುಹ! ।
ಏತಸ್ಯ "ಬಾಲಪಾಲ"ಸ್ಯ ಜ್ಞಾನಂ ವರ್ಧಯ! ವರ್ಧಯ!! ॥ ೯ ॥

ಸಿದ್ಧಾಂತಕೀರ್ತಿ ಮುನೀಂದ್ರರಿಂದ ನಮಿಸಲ್ಪಟ್ಟ ಪಾದಕಮಲ ಗಳುಳ್ಳ ಮುನಿವಂದ್ಯರೇ! ಈ "ಬಾಲಪಾಲ" (ಶಿಶುಪಾಲ)ನ ಜ್ಞಾನ ವನ್ನು ಹೆಚ್ಚಿಸಿರಿ! ಹೆಚ್ಚಿಸಿರಿ!!

ಐದಂಯುಗೀನಭಕ್ತಾಸ್ತು ಯಾಚಂತೇ ತ್ವಾಮಹರ್ನಿಶಿ ।
ಐಶ್ವರ್ಯಂ ಭೋಗ ವಸ್ತೂನಿ ವೀತರಾಗಮಹೋ ಭುವಿ ॥ ೧೦ ॥

ಇಂದಿನ ಕಲಿಯುಗದ ಜಿನಭಕ್ತರು ಹಗಲು-ರಾತ್ರಿ ರಾಗದ್ವೇಷ ರಹಿತನಾದ ನಿನ್ನ ಬಳಿ ಬಂದು ಐಶ್ವರ್ಯ ಹಾಗೂ ಭೋಗೋಪ ಭೋಗವಸ್ತುಗಳನ್ನು ಬೇಡುತ್ತಾರೆಂಬುದು ನಿಜವಾಗಿಯೂ ಆಶ್ಚರ್ಯದ ಸಂಗತಿಯಾಗಿದೆ.

ಓಘಂ ಹಿ ಕರ್ಮಶತ್ರೂಣಾಂ ಜಿತ್ವಾ ಜಾತೋ ಜಿನೇಶ್ವರ! ।
ಓಂಕಾರಸಾಗರೋತ್ಪನ್ನಂ ದೇಹಿ ಧರ್ಮಾಮೃತಂ ಮಮ ॥ ೧೧ ॥

ಘಾತಿಕರ್ಮಗಳೆಂಬ ವೈರಿಗಳನ್ನು ಜಯಿಸಿ ಜಿನೇಶ್ವರನೆಂದು ಕರೆಯಲ್ಪಡುವ ಜಿನದೇವನೇ! ನಿನ್ನ "ಓಂ" ಎಂಬ ಶಬ್ದಸಾಗರದಲ್ಲಿ ಉದ್ಭವಿಸು, ಧರ್ಮಾಮೃತವನ್ನು ನನಗೆ ಕರುಣಿಸು!

ಔತ್ಸುಕ್ಯೇನ ಮಯಾ ಭಕ್ತ್ಯಾ ಸ್ತುತಿರಕ್ಷರಮಾಲಿಕಾ ।
ಔಪಾಸನಾರ್ಥಂ ದೇವಸ್ಯ ಯಥಾಮತಿ ವಿನಿರ್ಮಿತಾ ॥ ೧೨ ॥

ಭಕ್ತಿಪರವಶತೆಯಿಂದ ಉತ್ಸುಕಗೊಂಡ ನಾನು ಭಗವಂತನ ಪೂಜೋಪಾಸನೆಗಾಗಿ ಯಥಾಶಕ್ತಿ ಈ "ಅಕ್ಷರಮಾಲಿಕೆ" ಎಂಬ ಸ್ತೋತ್ರವನ್ನು ರಚಿಸಿದ್ದೇನೆ.

ಕರ್ಮಣೋ ಧರ್ಮಮರ್ಮಾಸಿ ಕೃತಕೃತ್ಯೋ ಭವಾನ್ ಜಿನ! ।
ಕನಕಾಭಶರೀರೋऽಸಿ ಕಮಲಾಯತಲೋಚನ! ॥ ೧೩ ॥

ಸುವರ್ಣದಂತೆ ಶೋಭಿಸುವ ಶರೀರವುಳ್ಳ, ಕಮಲದಂತೆ ದೀರ್ಘ ನೇತ್ರವುಳ್ಳ ಜಿನೇಂದ್ರ ಪ್ರಭುವೇ! ನೀನು ಕರ್ತವ್ಯದಕ್ಷನೂ, ಧರ್ಮ

ರಕ್ಷಕನೂ, ಕೃತಕೃತ್ಯ ಅರ್ಥಾತ್ ಮಾಡಬೇಕಾದ ಕರ್ತವ್ಯಗಳನ್ನು ಮುಗಿಸಿರುವವನೂ ಆಗಿರುತ್ತೀ !

ಖಗಮಾನವದೇವೇಂದ್ರೈಃ ಸ್ತೂಯಮಾನೇ ಜಿನೇಶ್ವರೇ ।
ಖಮಾಶ್ರಿತ ಸಭಾಮಧ್ಯೇ ಧರ್ಮವೃಷ್ಟಿರಭೂತ್ತದಾ ॥ ೧೪ ॥

ವಿದ್ಯಾಧರೇಂದ್ರ, ನರೇಂದ್ರ, ದೇವೇಂದ್ರರುಗಳಿಂದ ಭಗವಾನ್ ತೀರ್ಥಂಕರ ದೇವರು ಸ್ತುತಿಸಲ್ಪಡುತ್ತಿರಲು, ಆಕಾಶದ "ಸಮವ ಸರಣ"ವೆಂಬ ಧರ್ಮಸಭೆಯಲ್ಲಿ ಆಗ ಓಂಕಾರವೆಂಬ ಧರ್ಮದ ಮಳೆ (ದಿವ್ಯಧ್ವನಿ) ಸುರಿಯಿತು.

ಗಣಾಧಿಪ ಮುನೀಂದ್ರಸ್ತು ಶ್ರುತ್ವಾ ತಾಂ ದಿವ್ಯಭಾರತೀಂ ।
ಗಗನಸ್ಥಸಭಾಯಾಂ ತು ಶ್ರೋತೃಭ್ಯೋಽರ್ಥಂ ಜಗಾದ ಚ ॥ ೧೫ ॥

ಗಣಧರ ಮುನೀಂದ್ರರು ಭಗವಂತನ ಆ ದಿವ್ಯವಾಣಿಯನ್ನು ಕೇಳಿ ತಿಳಿದು ಸಮವಸರಣ ಸಭೆಯಲ್ಲಿದ್ದ ಶ್ರೋತೃವೃಂದಕ್ಕೆ ಅದರ ಅರ್ಥವನ್ನು ವಿವರವಾಗಿ ತಿಳಿಸಿದರು.

ಘನಕರ್ಮಾಟವೀ ದಗ್ಧಾ ಯೇನ ದಾವಾನಲೇನ ಯಾ ।
ಘನಸಂಸೃತಿ ನೌಕಾಯಾಃ ಸ ದೇವೋ ನಾವಿಕೋಽಸ್ತು ನಃ ॥ ೧೬ ॥

ಕಾಡ್ಗಿಚ್ಚಿನಂತೆ ಯಾವನು ದಟ್ಟವಾದ ಕರ್ಮಾರಣ್ಯವನ್ನು ಸುಟ್ಟು ಭಸ್ಮಗೊಳಿಸಿದನೋ, ಆ ಜಿನದೇವನು ನಮ್ಮ ಸಂಸಾರ ನೌಕೆಗೆ ಚತುರ ನಾವಿಕನಾಗಿರಲಿ !

'ಙ' ಇತ್ಯಕ್ಷರಂ ಯಂತ್ರೇ ಲಿಖಂತಿ ಖಲು ಯಾಂತ್ರಿಕಾಃ ।
ಙ ಸ್ಯ ಶಕ್ತಿರಮೋಘಾಸ್ತಿ ದೇವಸನ್ನಿಧಿಮಾಶ್ರಿತೇ ॥ ೧೭ ॥

ಯಂತ್ರ ಪೂಜೆಯಲ್ಲಿ ಯಾಂತ್ರಿಕರು ಯಂತ್ರದಲ್ಲಿ "ಜ" ಎಂಬ ಬೀಜಾಕ್ಷರವನ್ನು ಬರೆಯುತ್ತಾರೆ. ದೇವರ ದಿವ್ಯ ಸನ್ನಿಧಿ ಪಡೆದಲ್ಲಿ ಆ ಬೀಜಾಕ್ಷರದ ಶಕ್ತಿಯು ಅಚಿಂತ್ಯ ಹಾಗೂ ಪ್ರಬಲವಾಗುವ್ರದು.

**ಚಂ**ದ್ರಬಿಂಬಾನನಂ, ಯಸ್ಯ, ಚಂದ್ರಸನ್ನಿಭಶೀತಲಂ ।
ಚಂದ್ರಪ್ರಭಜಿನೇಂದ್ರಸ್ಯ ಮುಖಂ ಮೇಽಸ್ತು ಚಿರಂಹೃದಿ ॥ ೧೮ ॥

ಚಂದ್ರಬಿಂಬದಂತೆ ಸುಂದರವೂ, ಶೀತಲ ಹಾಗೂ ಶಾಂತಿ ದಾಯಕವೂ ಆಗಿರುವ ಮುಖವನ್ನು ಹೊಂದಿರುವ ಚಂದ್ರಪ್ರಭ ಜಿನೇಂದ್ರರ ಆ ಮನೋಹರವಾದ ಮುಖಮಂಡಲವು ಯಾವಾಗಲೂ ನನ್ನ ಹೃದಯಮಂದಿರದಲ್ಲಿ ಸ್ಥಿರವಾಗಿ ನಿಂತಿರಲಿ!

**ಛ**ತ್ರಚಾಮರ — ಸಂದೋಹೈಃ ಸೇವ್ಯಮಾನೋ! ಸುರೇಶ್ವರೈಃ ।
ಛತ್ರವತ್ ಭಗವನ್! ಪಾಹಿ ಭವತಾಪಹರೋ ಜಿನ! ॥ ೧೯ ॥

ಛತ್ರ (ಮುಕ್ಕೊಡೆ) ಮತ್ತು ಚಾಮರಗಳ ಸಮೂಹದಿಂದ, ದೇವೇಂದ್ರರುಗಳ ಮೂಲಕ ಸೇವೆ ಪಡೆದಿರುವ ಜಿನದೇವನೇ! ಈ ಸಂಸಾರತಾಪವೆಂಬ ಬಿಸಿಲ ಬೇಗೆಗೆ ಬೆಂದಿರುವ ನನ್ನನ್ನು ಛತ್ರ (ಕೊಡೆ)ಯ ಹಾಗೆ ಬಂದು ರಕ್ಷಿಸು!

**ಜ**ಯನಾದಂ ಸುರಾಶ್ಚಕ್ರುರ್ದಿವಶ್ಚಕ್ರೇ ಭುವಂ ಗತಃ ।
ಜನ್ಮಕಲ್ಯಾಣಮಾಕರ್ತುಂ ಜಿನಬಾಲಸ್ಯ ಸತ್ವರಂ ॥ ೨೦ ॥

ಜಿನಶಿಶುವಿನ ಜನನವಾದಾಗ ಸ್ವರ್ಗದಿಂದ ದೇವತೆಗಳು ಜಯ ಜಯಕಾರ ಗೈದರು. ತಕ್ಷಣವೇ ದೇವೇಂದ್ರನು ಜಿನನ ಜನ್ಮಕಲ್ಯಾಣ ವನ್ನಾಚರಿಸಲು ಸ್ವರ್ಗದಿಂದ ಭೂಮಿಗಿಳಿದು ಬಂದನು.

"**ಝ್ಞಂ** ಝ್ಞಾ"ವಾತಸಮೋ ದೇವ! ಸಂಸಾರೇ ದುಃಖಭೂರುಹಾಂ ।
ಝುಟಿತಿ ತ್ವಂ ಸಮಾಕರ್ಷನ್ ದುಃಖವೃಕ್ಷಾನ್ ವಿನಾಶಯ ॥೨೧॥

ಹೇ ಸ್ವಾಮಿಯೇ! ನೀನು ಸಂಸಾರದುಃಖವೆಂಬ ವೃಕ್ಷಗಳಿಗೆ ಬಿರುಗಾಳಿಯಂತಿದ್ದೀಯೇ! ಆದುದರಿಂದ ಸಂಸಾರವೃಕ್ಷಕ್ಕೆ ತಾಯಿ ಬೇರಿನಂತಿರುವ ಸರ್ವ ದುಃಖಗಳನ್ನು ಸೆಳೆದು ಬಾಗಿಸಿ ಬೇಗನೆ ನಾಶಪಡಿಸು.

"ಞ" ಇತ್ಯಕ್ಷರಂ ಮಂತ್ರೇ ಬೀಜಾಕ್ಷರಮಿತಿಶ್ರುತಂ ।
"ಞ" ಏವ ದೇವಮಂತ್ರಸ್ಥಂ ಸ್ಯಾನ್ಮಂತ್ರಂ ಸಫಲೀಭವೇತ್ ॥೨೨॥

"ಞ" ಎಂಬ ಅಕ್ಷರವು ಮಂತ್ರದಲ್ಲಿ ಬೀಜಾಕ್ಷರವೆಂದು ಪ್ರಸಿದ್ಧಿ ಪಡೆದಿದೆ. "ಞ" ಎಂಬಾಕ್ಷರವು ದೇವಮಂತ್ರದೊಳಗೆ ಸೇರಿದ್ದಾದರೆ ಆ ಮಂತ್ರವು ಸಫಲವಾಗುವುದು.

**ಟಂ**ಕೋತ್ಕೀರ್ಣಸಮಂ ವಂದೇ ನಿರ್ವಾಣೋತ್ಸವವೈಭವಂ ।
ಟಂಕಿತಂ ಭುವಿ ಸರ್ವತ್ರ ಸತಾಂ ತನ್ನಾಮ ಮಾನಸೇ ॥ ೨೩ ॥

ಸೂಕ್ಷ್ಮಛೇಣದಿಂದ ಕೊರೆದಂತೆ, ಚರಮಶರೀರಕ್ಕಿಂತ ಸ್ವಲ್ಪ ಕಡಿಮೆ ಪ್ರಮಾಣದ ಆಕಾರವುಳ್ಳ ವೈಭವಪೂರ್ಣವಾದ ನಿರ್ವಾಣ-ಕಲ್ಯಾಣವನ್ನು ಪಡೆದ, ಯಾವ ನಿಮ್ಮ ಹೆಸರು ಲೋಕದ ಸಜ್ಜನರ ಮಾನಸಪಟಲದ ಮೇಲೆ ಎಲ್ಲಾ ಕಡೆ ಅಚ್ಚಳಿಯದಂತೆ ಕೆತ್ತಲ್ಪಟ್ಟಿತೋ ಅಂತಹ ಜಿನೇಶ್ವರರಾದ ನಿಮ್ಮನ್ನು ವಂದಿಸುತ್ತೇನೆ.

**ಠ**ಕ್ಕುರಂ ನಾಥ-ವಂಶಸ್ಯ ನೌಮಿ ಸಿದ್ಧಾರ್ಥನಂದನಂ ।
"ಠಂ ಠಂ" ಘಟ ನಿನಾದೈಸ್ತು ಜನ್ಮಸ್ನಪನಕೌತುಕಂ ॥ ೨೪ ॥

ನಾಥವಂಶಕ್ಕೊಡೆಯನಾದ ಸಿದ್ಧಾರ್ಥ ರಾಜನ ಸುಪುತ್ರನಾದ, ಜನ್ಮಾಭಿಷೇಕ ಸಮಯದಲ್ಲಿ ಕಲಶಗಳ "ಠಂ ಠಂ" ಎಂಬ ಧ್ವನಿಯಿಂದ ಎಲ್ಲರ ಕುತೂಹಲಕ್ಕೆ ಕಾರಣನಾದ ಆ ಮಹಾವೀರಪ್ರಭುವನ್ನು ನಾನು ನಮಸ್ಕರಿಸುತ್ತೇನೆ.

**ಡ**ಮರುಧ್ವನಿಮಾಕರ್ಣ್ಯ ಜನೈರ್ಜ್ಞಾತೋ ಜಿನೋದಯಃ ।
ಡಂಡಂ ನಿನಾದೋ ಸ್ವರ್ಗೇಽಭೂತ್ ಸ್ವರ್ಗಿಣೋ ಭುವಮಾಗತಾಃ॥೨೫॥

ಡಂ ಡಂ ಎಂದು ಸ್ವರ್ಗದಲ್ಲಿ ಡಮರು (ನಗಾರಿ) ಧ್ವನಿ ಕೇಳಿಸಿತು. ಸ್ವರ್ಗದ ದೇವತೆಗಳು ಭೂಮಿಗೆ ಬಂದರು ಸ್ವರ್ಗದ ನಗಾರಿಯ ಶಬ್ದ ಕೇಳಿ ಜನರು ಜಿನಬಾಲಕನ ಉದಯ ಅರ್ಥಾತ್ ಜನ್ಮವಾಯಿತೆಂದು ತಿಳಿದರು.

**ಢ**ಕ್ಕಾಸಮಂ ಚ ಗಂಧರ್ವಾ ಗೀತಂ ಗಾಯಂತಿ ಸುಂದರಂ ।
ಢಂ ಢಂ ಶಬ್ದಾನುಸಾರಿಣ್ಯೋ ನನರ್ತುಃ ಕಿನ್ನರಸ್ತ್ರಿಯಃ ॥ ೨೬ ॥

ಆ ಸಮಯದಲ್ಲಿ ಢಕ್ಕಾ ವಾದ್ಯ (ತಮಟೆ) ದೊಂದಿಗೆ ಸುರ ಗಂಧರ್ವರು ಮಧುರ ಕಂಠದಿಂದ ಭಗವಂತನ ಗುಣ-ಗಾನ ಮಾಡಿದರು. ಕಿನ್ನರ ಲೋಕದ ಕಿನ್ನರಿಯರು ತಮಟೆಯ ತಾಳಕ್ಕೆ ತಕ್ಕಂತೆ ನರ್ತನ ಗೈದರು.

**ಣ**ಮೋ ಜಿಣಾಣಂ ಸಿದ್ಧಾಣಂ ಮುಣೀಣಂ ಸಿರಸಾ ಣಮೋ ।
ಣಮೋಂಕಾರಮಿದಂ ಧ್ಯಾತ್ವಾ ಭವ್ಯಾ ಮುಕ್ತಾ ಭವಂತಿ ಹಿ ॥ ೨೭ ॥

ಅರಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಮುನಿಗಳಿಗೆ ನಮಸ್ಕಾರವೆಂಬೀ ಪ್ರಸಿದ್ಧವಾದ ನಮಸ್ಕಾರಮಂತ್ರವನ್ನು ಧ್ಯಾನಿಸಿ, ಭವ್ಯಜೀವಿಗಳು ಸಂಸಾರದುಃಖದಿಂದ ಮುಕ್ತರಾಗುತ್ತಾರೆ.

**ತ**ಕ್ಷಕೋ ಭವವೃಕ್ಷಸ್ಯ ರಕ್ಷಕೋ ಧರ್ಮಸಂತತೇಃ ।
ರಕ್ಷಕಸ್ಯಾತ್ಮರಾಜಸ್ಯ ಧ್ಯಾನಾನ್ಮುಕ್ತಿರ್ಭವಿಷ್ಯತಿ ॥ ೨೮ ॥

ನೀನು ಸಂಸಾರವೆಂಬ ವಿಷವು ವೃಕ್ಷವನ್ನು ಕಡಿಯುವ ತಕ್ಷಕ (ಮರಕಡಿಯುವವ)ನಾಗಿದ್ದೀ. ಆತ್ಮನೆಂಬ ಆ ತಕ್ಷಕ ರಾಜನ ಧ್ಯಾನ ದಿಂದ ಸಂಸಾರದಿಂದ ಮುಕ್ತಿ ದೊರೆಯುವುದು.

**ಥ**ಕಾರೋ ಭವತೀರಸ್ಥಸ್ತೀರ್ಥಂಕರ ಇತಿ ಸ್ಮೃತಃ ।
ತವೇವ ದೇವಮಾಲಂಬ್ಯ ತರಾಮಿ ಭವಸಾಗರಂ ॥ ೨೯ ॥

"ಥ"ಕಾರವು ಭವಸಮುದ್ರದ ಆಚೆ ದಡದಲ್ಲಿರುವ ಸ್ಥಿತಿಯನ್ನು ಸೂಚಿಸುವ ಕಾರಣ, ತೀರಸ್ಥನಾಗಿ, ತೀರಕ್ಕೆ ಪಾರು ಮಾಡುವ, "ತೀರ್ಥಂಕರ"ನೆಂದು ನೀನು ಸ್ಮರಿಸಲ್ಪಡುತ್ತೀಯಾದ್ದರಿಂದ, ತೀರ್ಥಂಕರ ದೇವನಾದ ನಿನ್ನ ಅವಲಂಬನೆಯಿಂದ ಈ ಭವಸಾಗರವನ್ನು ನಾನು ಸುಲಭವಾಗಿ ಈಜಿ ದಾಟುತ್ತೇನೆ.

**ದ**ಮನಂ ಮೋಹರಾಜಸ್ಯ ಕುರ್ವತಾ ಜ್ಞಾನದೀಪಿಕಾ ।
ದಯಾಸಿಂಧೋ! ತ್ವಯಾ ಪ್ರಾಪ್ತಾ, ಜ್ಞಾನಜ್ಯೋತಿಂ ಹಿ ದೇಹಿ ಮೇ ॥ ೩೦ ॥

ಮೋಹನೀಯವೆಂಬ ಕರ್ಮಗಳ ರಾಜನನ್ನು ನಿಗ್ರಹಿಸಿ, ಮಣಿಸಿದ ನಿನಗೆ ಅಪೂರ್ವವಾದ ಜ್ಞಾನದೀಪಿಕೆಯು ಲಭಿಸಿದೆ. ಕರುಣಾ ಸಾಗರನೆನಿಸಿದ ಜಿನೇಂದ್ರ ಪ್ರಭುವೇ! ನನಗೂ ಆ ಜ್ಞಾನದೀಪಿಕೆಯ, (ದಿವ್ಯಜ್ಯೋತಿ)ಯನ್ನು ಕರುಣಿಸು!

**ಧ**ನದೇನ ಸುರೇಂದ್ರಸ್ಯ ಸೂಚನಾಂ ಪ್ರಾಪ್ಯ ತತ್ ಕ್ಷಣಂ ।
ಧರ್ಮೋಪದೇಷ್ಟೇ ವೀರಾಯ ರಚಿತಂ ಹಿ ಸಭಾಗೃಹಮ್ ॥ ೩೧ ॥

ಭಗವಂತನಿಗೆ ಕೇವಲಜ್ಞಾನ (ಅನಂತಜ್ಞಾನ) ಪ್ರಾಪ್ತವಾದ, ಶುಭಸೂಚನೆಯೊಡನೆ ದೇವೇಂದ್ರನ ಆಜ್ಞೆಯ ಮೇರೆಗೆ ತಕ್ಷಣ ಕುಬೇರನು ಧರ್ಮೋಪದೇಶಕರಾದ, ಮಹಾವೀರ ಪ್ರಭುವಿಗೆ "ಸಮವ ಸರಣ"ವೆಂಬ ದಿವ್ಯ ಸಭಾಭವನವನ್ನು ರಚಿಸಿದನು.

**ನ**ರೇಂದ್ರಖಗನಾಗೇಂದ್ರದೇವೇಂದ್ರೈಃ ಸನ್ನುತೋ ಭುವಿ ।
ನಮಾಮಿ ತ್ವಾಮಹಂ ದೇವ! ಮಾಂ ಪಾಹಿ ಪರಮೇಶ್ವರ! ॥ ೩೧ ॥

ನರೇಂದ್ರ ಪಕ್ಷೀಂದ್ರ ನಾಗೇಂದ್ರ ದೇವೇಂದ್ರರಿಂದ ನಮಿಸಲ್ಪಟ್ಟ ಲೋಕದಲ್ಲಿ ಕೀರ್ತಿವೆತ್ತ ಪ್ರಭುವೇ! ನಿನಗಿದೋ ನನ್ನ ನಮನ. ಪರಮೇಶ್ವರನೇ ನನ್ನನ್ನು ರಕ್ಷಿಸು.

**ಪ**ರಿತ್ಯಜ್ಯ ಚ ಪಾಪಾನಿ ತ್ವಾಮೇವ ಭಜತೋ ಮಮ ।
ಪರಮಾತ್ಮಪದಂ ದೇಹಿ ಆತ್ಮೈವಾರಾಧ್ಯದೇವತಾ ॥ ೩೨ ॥

ಪಾಪಕರ್ಮಗಳನ್ನು ತ್ಯಜಿಸಿ, ನಿನ್ನನ್ನೇ ಭಜಿಸುವ ನನ್ನಾತ್ಮನೇ ನಿಶ್ಚಯವಾಗಿಯೂ ಪರಮಾತ್ಮನಾಗುತ್ತಾನೆ. ಆದುದರಿಂದ ನನ್ನ ಆತ್ಮನೇ ನನ್ನ ಆರಾಧ್ಯದೇವನಾಗಿದ್ದಾನೆ.

**ಫ**ಲಾದ್ಯನರ್ಘವಸ್ತೂನಿ ಕಥಂ ಪ್ರಾಪ್ನೋಮ್ಯಕಿಂಚನಃ ।
ಫಲಂ ಸ್ಯಾದ್ಯದಿ ಭಕ್ತ್ಯಾ ಮೇ ಪ್ರಸೀದ ಪರಮೇಶ್ವರ! ॥ ೩೩ ॥

ಫಲ ಮುಂತಾದ ಅಮೂಲ್ಯ ವಸ್ತುಗಳನ್ನು ಬಡವನಾದ ನಾನೆಲ್ಲಿಂದ ತರಲಿ? ಒಂದು ವೇಳೆ ನನ್ನ ಭಕ್ತಿಗೆ ಫಲ ಇರುವು ದಾದರೆ, ಹೇ ಪರಮೇಶ್ವರ! ನನ್ನ ಮೇಲೆ ಪ್ರಸನ್ನನಾಗು.

**ಬ**ಲಿನೋ ಸುಖಿನೋ ಲೋಕೇ ನ ಸಂತಿ ಭವತಃ ಪರೇ ।
ಬಲವಾನ್ ಮೋಹಮಲ್ಲಸ್ತು ಲೀಲಯಾ ವಿಜಿತಸ್ತ್ವಯಾ ॥ ೩೪ ॥

ಮೋಹವೆಂಬ ಬಲಶಾಲಿಯಾದ ಮಲ್ಲನನ್ನು ಲೀಲಾಜಾಲವಾಗಿ ಗೆದ್ದಿರುವ ನಿನಗಿಂತಲೂ ಬಲಶಾಲಿಗಳು ಈ ಲೋಕದಲ್ಲಿ ಬೇರೆ ಯಾರೂ ಇಲ್ಲ. ಏಕೆಂದರೆ ನೀನು ಅನಂತವೀರ್ಯನೂ ಮತ್ತು ಅನಂತ ಸುಖಿಯೂ ಆಗಿದ್ದೀ ಎಂದು ತಾತ್ಪರ್ಯ.

**ಭ**ಕ್ತಿರೇಕೈವ ಶುಲ್ಕಂ ಸ್ಯಾನ್ಮೋಕ್ಷಲಕ್ಷ್ಮೀಕರಗ್ರಹೇ ।
ಭಕ್ತವತ್ಸಲ! ಮಾಮಾಶು ನಯಮುಕ್ತಿವಧೂಗೃಹಮ್ ॥ ೩೬ ॥

ಮೋಕ್ಷ ಲಕ್ಷ್ಮೀಯ ಪಾಣಿಗ್ರಹಣಕ್ಕೆ ಭಕ್ತಿಯೊಂದೇ ವಧೂ ದಕ್ಷಿಣೆಯಾಗಿದೆ. ಆದುದರಿಂದ ಭಕ್ತವತ್ಸಲನಾದ ಜಿನೇಶನೇ! ನನ್ನನ್ನು ಬೇಗನೆ ಮುಕ್ತಿ ಎಂಬ ವಧುವಿನ ಮನೆಗೆ ಕರೆದೊಯ್ಯು.

**ಮ**ನಸಾ, ಕರ್ಮಣಾ, ವಾಚಾ, ಭಜೇಽಹಂ ಭವತಾರಕಂ ।
ಮಲಿನಂ ಕರ್ಮಪಂಕಾದ್ಧಿ ದೇವ! ಮಾಂ ನಿರ್ಮಲೀಕುರು! ॥ ೩೭ ॥

ಮನ, ವಚನ, ಕಾಯಗಳಿಂದ ಭವತಾರಕನಾದ ನಿನ್ನನ್ನು (ನಿತ್ಯವೂ) ಭಕ್ತಿಯಿಂದ ಭಜಿಸುತ್ತೇನೆ. ದೇವನೇ ಕರ್ಮಮಲಕಲಂಕ (ಕೆಸರು)ದಿಂದ ಮಲಿನನಾದ ನನ್ನನ್ನು ನಿರ್ಮಲಗೊಳಿಸು.

**ಯ**ಸ್ಯ, ಜ್ಞಾನಸಮುದ್ರೇಽಂತಸ್ತತ್ವರತ್ನಾನಿ ಸಂತಿ ಹಿ ।
ಯೋನು ಸಾಹಸಿಕೋ ಮಜ್ಜತ್ಯಾಪ್ನುಯಾತ್ ತತ್ವಸಂಪದಂ ॥೩೮॥

ಭಗವಂತನ ಅನಂತಜ್ಞಾನವೆಂಬ ಅಗಾಧವಾದ ಸಮುದ್ರದೊಳಗೆ ಅಮೋಘವಾದ ತತ್ವರತ್ನಗಳಡಗಿವೆ. ಯಾರು ಸಾಹಸದಿಂದ ಆ ಆಳವಾದ ಜಲದೊಳಗೆ ಮುಳುಗಬಲ್ಲನೋ ಅಂಥವನಿಗೆ ಆ ಅಮೂಲ್ಯವಾದ ತತ್ವರತ್ನಗಳು ಪ್ರಾಪ್ತವಾಗುತ್ತವೆ.

**ರ**ಜೋಭಿಃ ಕಾರ್ಮಣೈರಾತ್ಮಾ ಮಲಿನೋಽನಾದಿಕಾಲತಃ
ರಜಸಾಮಾಸ್ರವಂ ರೋದ್ಧುಂ ಶಕ್ತಿಂ ಮೇ ದೇಹಿ ನಿರ್ಮಲ! ॥ ೩೯ ॥

ಅನಾದಿಕಾಲದಿಂದ ಕಾರ್ಮಣಪರಮಾಣುಗಳ ಧೂಳಿಂದ ಈ ಆತ್ಮನು ಧೂಸರಿತನಾಗಿ ಮಲಿನಗೊಂಡಿದ್ದಾನೆ. ನಿರ್ಮಲನಾದ ಪರಮಾತ್ಮನೇ! ಆ ಕರ್ಮರಜಸ್ಸು (ಧೂಳು)ಗಳು ನನ್ನ ಆತ್ಮಪ್ರದೇಶಕ್ಕೆ ಆಸ್ರವವಾಗದಂತೆ, ಅರ್ಥಾತ್ ಬಂದುಸೇರದಂತೆ ತಡೆಯುವ (ಸಂವರ) ಮಹಾಶಕ್ತಿಯನ್ನು ನನಗೆ ನೀಡು.

**ಲ**ಸಲ್ಲೋಕಲಲಾಟೇ ಯೋ ಭ್ರಾಜತೇ ಜ್ಞಾನಭಾಸ್ಕರಃ ।
ಲಲನಾಲೀಲಯಾ ದೂರೋ ವಂದೇ ತಂ ವೀತರಾಗಿಣಂ ॥ ೪೦ ॥

ಯಾರು, ಶೋಭಿಸುವ ಲೋಕಾಗ್ರ ಭಾಗದಲ್ಲಿ, ಜ್ಞಾನಸೂರ್ಯನಂತೆ ಬೆಳಗುತ್ತಿರುವನೋ ಲಲನಾಮಣಿ (ಸುಂದರ ತರುಣಿ) ಯರ, ಹಾವ-ಭಾವ ವಿಲಾಸ ವಿಭ್ರಮಾದಿ ಲೀಲೆಗಳಿಂದ ದೂರವಾಗಿದ್ದಾನೋ ಅಂತಹ ಜ್ಞಾನಭಾಸ್ಕರನನ್ನು ನಾನು ವಂದಿಸುತ್ತೇನೆ.

**ವ**ರ್ಧಮಾನಜಿನೇಂದ್ರಸ್ಯ ವರ್ಧತಾಂ ಜಿನಶಾಸನಂ ।
ವರ್ಧತಾಂ ಬಾಲಪಾಲಸ್ಯ ಭಕ್ತಿಸ್ತಸ್ಮಿನ್ ದಿನೇ ದಿನೇ ॥ ೪೧ ॥

ವರ್ಧಮಾನ ಜಿನೇಂದ್ರರ ಶಾಸನವು ವೃದ್ಧಿಯನ್ನೈದಲಿ! ಜಿನಶಾಸನದಲ್ಲಿ "ಬಾಲ-ಪಾಲ" (ಶಿಶುಪಾಲ) ಕವಿಯ ಭಕ್ತಿಯು ದಿನ ದಿನವೂ ಹೆಚ್ಚುತ್ತಿರಲಿ.

**ಶ**ಮನೇನ ಹಿ ಹಿಂಸಾಯಾ ಜಗನ್ಮಂಗಲಕಾರಕ! ।
ಶಬ್ದಬ್ರಹ್ಮಾಽಸಿ ವಾಗೀಶ! ಸ್ಮರಾಮಿ ಸತತಂ ಹೃದಿ ॥ ೪೨ ॥

ಲೋಕದಲ್ಲಿ ತಾಂಡವವಾಡುತ್ತಿದ್ದ ಹಿಂಸೆಯನ್ನು ಶಮನಗೊಳಿಸಿ ಜಗತ್ತಿಗೆ ಮಂಗಳವನ್ನುಂಟುಮಾಡಿದ, ಆದಿಬ್ರಹ್ಮನಾದ ನೀನು ಶಬ್ದ ಬ್ರಹ್ಮನೆನಿಸಿದೆ. ನಿನ್ನನ್ನು ನಾನು ಹೃದಯದಲ್ಲಿ ಸದಾ ಸ್ಮರಿಸುತ್ತೇನೆ.

**ಷ**ಡ್ದ್ರವ್ಯ ಸಪ್ತತತ್ವಾನಿ ಚಾಷ್ಟಕರ್ಮಾಣಿ ಹಿ ತ್ವಯಾ ।
ಷಡ್ಕರ್ಮಾಣಿ ಗೃಹಸ್ಥಾನಾಂ ದೇಶಿತಾನಿ ನಮೋಽಸ್ತು ತೇ ॥ ೪೩ ॥

ಜೀವಾಜೀವಾದಿ ಷಡ್ದ್ರವ್ಯ, ಸಪ್ತತತ್ವ ಹಾಗೂ ಅಷ್ಟವಿಧಕರ್ಮ ಸಿದ್ಧಾಂತ ಮತ್ತು ಗೃಹಸ್ಥರ ದೇವಪೂಜೆಯೇ ಮೊದಲಾದ ಆರು ನಿತ್ಯ ಕ್ರಿಯೆಗಳು ನಿನ್ನಿಂದ ಉಪದಿಷ್ಟವಾಗಿವೆಯಾದುದರಿಂದ ಜಿನನೇ ನಿನಗೆ ಬಾರಿ ಬಾರಿ ವಂದನೆಗಳು.

**ಸ**ದ್ದರ್ಶನ ಸಮೀಚೀನಜ್ಞಾನ ಚಾರಿತ್ರ–ತೇಜಸಾ ।
ಸದಾ ತ್ವಂ ಭ್ರಾಜಸೇ ದೇವ ದೇಹಿ ರತ್ನತ್ರಯಂ ನಿಧಿಂ ॥ ೪೪ ॥

ಸಮ್ಯಗ್ದರ್ಶನಜ್ಞಾನಚಾರಿತ್ರ (ಭಕ್ತಿ, ಜ್ಞಾನ, ವೈರಾಗ್ಯ) ಗಳೆಂಬ ರತ್ನತ್ರಯದ ತೆಜಸ್ಸಿನಿಂದ ದೇವನೇ! ನೀನು ಸದಾಕಾಲ ಬೆಳಗುತ್ತಿರುವೆ. ಆ ರತ್ನತ್ರಯನಿಧಿಯನ್ನು ನನಗೂ ದಯಪಾಲಿಸು.

**ಹ**ರನ್ ಕರ್ಮದ್ವಿಷಾಂ ಶೌರ್ಯಂ "ಹರ ಇತ್ಯಭಿಧೀಯಸೇ ।
ಹರ ಮೇ ಮೋಹಜಾಲಂ ನು ಸ್ಮರಾಮಿ ಸತತಂ ಹರ! ॥ ೪೫ ॥

ಕರ್ಮಶತ್ರುಗಳ ಶೌರ್ಯವನ್ನು ನಾಶಪಡಿಸಿ "ಹರ" ನೆಂಬ ಹೆಸರಿಂದ ಕರೆಯಲ್ಪಡುವ "ಹರ" ನೇ! ನನ್ನ ಸಂಸಾರದ ಮೋಹ ಪಾಶವನ್ನು ಬೇಗನೆ ಹರಿಸು.

**ಗ್ರ**ಥಿತಾಂ ಶಿಶುಪಾಲೇನ ಅಕ್ಷರಾನುಕ್ರಮೈಃ ಸುಮೈಃ ।
ಮಾಲಾಮಿಮಾಂ ಪುಮಾನ್ ಧೃತ್ವಾಪ್ರಾಪ್ನುಯಾನ್ಮುಕ್ತಿಸಂಪದಂ॥೪೬॥

"ಬಾಲಪಾಲ"ನೆಂಬ ಕವಿಕಿಂಕರನಿಂದ ಅಕ್ಷರಗಳೆಂಬ ಪುಷ್ಪಗಳಿಂದ ಕ್ರಮಬದ್ಧವಾಗಿ ಪೋಣಿಸಲ್ಪಟ್ಟ ಈ ಪೂಮಾಲೆಯನ್ನು ಧರಿಸಿ ಮಾನವನು ಮೋಕ್ಷ ಸಂಪತ್ತನ್ನು ಅವಶ್ಯ ಪಡೆಯುವನು.

—: ಓಂ :—

( ಸಮಾಪ್ತಾಕ್ಷರಮಾಲಿಕಾ )

# ಶ್ರೀ ಚಂದ್ರಜಿನೇಂದ್ರಾಷ್ಟಕಮ್ ।

ಚಂದ್ರಪ್ರಭಂ ವಿಜಿತ ಚಂದ್ರಮುಖಂ ಮುನೀಂದ್ರಂ ।
ಚಂದ್ರಾದಿ-ದೇವನಿವಹೈಃ ಸ್ತುತಪಾದಪದ್ಮಂ ॥
ಇಂದ್ರಾರ್ಚಿತಂ ಸುರನರೇಂದ್ರ ಮೃಗೇಂದ್ರವಂದ್ಯಂ ।
ವಂದೇ ಸದಾಹಮಪಿ ತಂ ಮನಸಾ ಜಿನೇಂದ್ರಂ ॥ ೧ ॥

**ಭಾವ:** ಚಂದ್ರನ ಮುಖವನ್ನು ನಾಚಿಸುವಂತಿರುವ ಮುನೀಂದ್ರ ಪೂಜ್ಯರಾದ, ಚಂದ್ರನೇ ಪ್ರಮುಖನಾಗಿ ಉಳ್ಳ ಜ್ಯೋತಿಷ್ಕ ದೇವತೆಗಳ ಸಮೂಹಗಳಿಂದ ಸ್ತೋತ್ರ ಮಾಡಲ್ಪಟ್ಟ, ಪಾದಕಮಲಗಳುಳ್ಳ, ಇಂದ್ರನಿಂದ ಅರ್ಚಿಸಲ್ಪಟ್ಟ ದೇವೇಂದ್ರ, ನರೇಂದ್ರ (ರಾಜರು) ಮತ್ತು ಮೃಗೇಂದ್ರ(ಸಿಂಹ)ರಿಂದ ವಂದಿಸಲ್ಪಟ್ಟ ಆ ಚಂದ್ರಪ್ರಭ ಜಿನದೇವರನ್ನು ನಾನು ಕೂಡ ಮನಃಪೂರ್ವಕವಾಗಿ ಸದಾಕಾಲವೂ ವಂದಿಸುತ್ತೇನೆ.

ಮೂರ್ತಿಃಸ್ವಯಂ ವಿವಿಧ ಶುದ್ಧಗುಣವ್ರಜಾನಾಂ ।
ಪೂರ್ತಿಃಸ್ವಯಂ ದಿವಿಜಸರ್ವಸುಖಾಕರಾಣಾಂ ॥
ಕೀರ್ತಿಃಸ್ವಯಂ ಭವವಿಮುಕ್ತಿಪಥಿ ಸ್ಥಿತಾನಾಂ ।
ಆರ್ತಿಂ ಸದಾ ಮಮ ಹರ ಪ್ರಣಮಾಮಿ ಭಕ್ತ್ಯಾ ॥ ೨ ॥

**ಭಾವ:** ನಾನಾ ಪ್ರಕಾರದ ಪರಿಶುದ್ಧವಾದ ಗುಣಗಳಿಗೆ ನೀವು ಸ್ವತಃ ಮೂರ್ತಿಯಾಗಿದ್ದೀರಿ. ದೇವಾಧಿದೇವತೆಗಳ ಸರ್ವ ರೀತಿಯ ಸುಖಗಳಿಗೆ ನೀವು ಪೂರಕರಾಗಿದ್ದೀರಿ. ಸಂಸಾರದ ಸರ್ವ ದುಃಖಗಳನ್ನು ದೂರಮಾಡುವ ಮಾರ್ಗದಲ್ಲಿರುವ ತ್ಯಾಗಿಗಳಿಗೆ ನೀವು ಕೀರ್ತಿದಾಯಕರಾಗಿದ್ದೀರಿ. ಅಂತಹ ನೀವು ನನ್ನ ದುಃಖವನ್ನು ಸದಾ ಪರಿಹರಿಸಿರಿ. ನಾನು ನಿಮ್ಮನ್ನು ಭಕ್ತಿಯಿಂದ ವಂದಿಸುತ್ತೇನೆ.

ಧರ್ಮಸ್ತ್ವಮೇವ-ಸುಖದೋ ಭವದುಃಖಹಾರಿನ್ ।
ಶರ್ಮಪ್ರದಃ ಪರಮಧರ್ಮರತಾಗ್ರಣೀನಾಂ ॥
ಮರ್ಮಜ್ಞ ಸ್ವಯಂ ತ್ವಮಪಿ ಕರ್ಮಶರಾವರೋಧೇ ।
ಕರ್ಮಕ್ಷಯಾದುದಿತಬೋಧ! ಸದಾ ನಮಾಮಿ ॥ ೩ ॥

**ಭಾವ :** ಭವ ದುಃಖವನ್ನು ನಾಶಮಾಡುವ ಪ್ರಭುವೇ! ಸುಖ ವೀಯುವ ಧರ್ಮಸ್ವಯಂ ನೀವೇ ಆಗಿದ್ದೀರಿ. ಶ್ರೇಷ್ಠ ಧರ್ಮನಿರತರನ್ನು ಮುನ್ನಡೆಸುವವರಾದ ಕರ್ಮಗಳೆಂಬ ಬಾಣಗಳನ್ನು ತಡೆಹಿಡಿಯುವಲ್ಲಿ ಅದರ ಮರ್ಮಜ್ಞರು ಸ್ವಯಂ ನೀವೇ ಆಗಿದ್ದೀರಿ. ಕರ್ಮಕ್ಷಯದಿಂದ ಕೇವಲ ಜ್ಞಾನದ ಉದಯವುಳ್ಳ ನಿಮಗೆ ನಿತ್ಯವೂ ವಂದಿಸುತ್ತೇನೆ.

ದಿವ್ಯಧ್ವನಿಃ ಕ್ಷರತಿ ದಿವ್ಯಮುಖಾಜ್ಜಿನೇಶ ।
ಭವ್ಯಾ ಭವಂತಿ ಸುಖಿನೋ ಭವ ದುಃಖ ಬಂಧಾತ್ ॥
ಕಂಠೋದ್ಭವೇನ ಮರುತಾ ಮುರಲೀನಿನಾದಃ ।
ಕಿಂ ಯಾಚತೇ ರಸಿಕಶ್ರೋತೃಜನಾಚ್ಚ ಲೋಕೇ ॥ ೪ ॥

**ಭಾವ :** ಹೇ ಜಿನೇಂದ್ರದೇವನೇ! ನಿನ್ನ ಕಂಠದಿಂದ ಹೊರಡುವ ಓಂಕಾರರೂಪಿಯಾದ ದಿವ್ಯ ಧ್ವನಿಗೆ ಯಾವ ಅಪೇಕ್ಷೆಯೂ ಇರುವುದಿಲ್ಲ. ಇದೇ ರೀತಿ ಕೊಳಲುವಾದಕನ ಕಂಠದಿಂದ ಹೊರಡುವ ಗಾಳಿ (ನಾದ-ಧ್ವನಿ)ಯು ರಸಿಕಶ್ರೋತೃಗಳಿಂದ ಯಾವ ಅಪೇಕ್ಷೆಯನ್ನೂ ಮಾಡುವುದಿಲ್ಲ. ಭಗವಂತನಿಗೆ ಕೇವಲ ಜ್ಞಾನ ಪ್ರಾಪ್ತಿಯಾದೊಡನೆ ದಿವ್ಯ ಧ್ವನಿ ಹೊರಡುವುದು ಸ್ವಾಭಾವಿಕ. ಕೊಳಲು ಬಾರಿಸುವಾಗ ಹೊರಡುವ ಗಾಳಿ-ಶಬ್ದವು (ಜಡ-ಪುದ್ಗಲ) ಜಡವಸ್ತುವಿಗೆ ಎಲ್ಲಿದೆ ಅಪೇಕ್ಷೆ? ಎಂದು ಭಾವವು.

ವಿಷ್ಣುಸ್ತು ಮುಹ್ಯತಿ ರಮಾ ರಮಣೀ-ವಿಲಾಸೇ ।
ಹರೋ, ದದೌ ನಿಜಶರೀರಮಪಿ ಪ್ರಿಯಾಯೈ ॥
ಪುತ್ರೀ ವಿಮೋಹವಿವಶೋ ವಿಧಿರತ್ರ ಚಿತ್ರಂ ।
ತ್ವಮೇವ ಮೋಹ-ವಿಜಯಿನ್ ಕುರು! ಮೋಹನಾಶಂ ॥ ೫ ॥

**ಭಾವ:** ಶ್ರೀವಿಷ್ಣುವು ಲಕ್ಷ್ಮೀದೇವಿಯ ವಿಲಾಸದಲ್ಲಿ ಮೋಹಿತನಾಗಿದ್ದಾನೆ ಶ್ರೀ ಪರಮೇಶ್ವರನು ತನ್ನ ಪ್ರಿಯಪತ್ನಿಯಾದ ಪಾರ್ವತಿ ದೇವಿಗೆ ಮೋಹವಶದಿಂದ ತನ್ನ ಶರೀರವನ್ನೇ (ಅರ್ಧಭಾಗ) ಕೊಟ್ಟು ಬಿಟ್ಟಿದ್ದಾನೆ. ಶ್ರೀ ಬ್ರಹ್ಮದೇವನು ತನ್ನ ಪುತ್ರಿಯಾದ ಸರಸ್ವತಿಯಲ್ಲೇ ಮೋಹಿತನಾಗಿದ್ದಾನೆ. ಇದು, ಅತ್ಯಾಶ್ಚರ್ಯಕರ ಸಂಗತಿಯಾಗಿದೆ. ಆದರೆ ಮೋಹವಿಜಯಿಯಾದ ಶ್ರೀ ಚಂದ್ರನಾಥ ಭಗವಂತನೇ ನೀನು ನಿರ್ಮೋಹಿಯಾಗಿರುವುದರಿಂದ ನನ್ನ ಮೋಹಪಾಶವನ್ನು ನಾಶಮಾಡು! ಸ್ವಾಮಿನ್!

ತ್ವಂ ನಿರ್ಮಲೋಽಸಿ! ಭುವನತ್ರಯವಂದಿತೋಽಸಿ ।
ತ್ವಂ ಕರ್ಮಠೋಽಸಿ, ಕಮಲಾಯತಲೋಚನೋಽಸಿ ॥
ಮೋಹಾಂಧಕಾರಮನಿಶಂ ಜಗತಾಂ ಪ್ರಹರ್ತಾ ।
ಘಾತಿಕ್ಷಯಾತ್ ಪರಮ ಕೇವಲಬೋಧಭಾನೋ! ॥ ೬ ॥

**ಭಾವ:** ಘಾತಿಕರ್ಮಗಳ ನಾಶದಿಂದ ಪ್ರಾಪ್ತವಾದ ಕೇವಲ ಜ್ಞಾನದ ಪ್ರಕಾಶದಿಂದ ಜಗಜಗಿಸುವ ಸೂರ್ಯನಂತಿರುವ ಚಂದ್ರನಾಥ ಭಗವಂತರೇ! ನೀವು ಕರ್ಮಕಲಂಕದಿಂದ ರಹಿತರಾಗಿದ್ದೀರಿ. ಮೂರೂ ಲೋಕಗಳಲ್ಲಿ ನೀವು ವಂದ್ಯರೆನಿಸಿದ್ದೀರಿ. ನೀವು ಕರ್ಮಠ — ಕೃತ ಕೃತ್ಯರಾಗಿದ್ದೀರಿ. ಕಮಲದಂತೆ ಆಯತ (ದೀರ್ಘ) ವಾದ ಸುಂದರ ವಾದ ಕಂಗಳನ್ನು ಹೊಂದಿದ್ದೀರಿ. ಸದಾಕಾಲವೂ ಜಗತ್ತಿನ ಜನರ

ಮೋಹಾಂಧಕಾರ (ಅಜ್ಞಾನ)ವನ್ನು ನಾಶಮಾಡಿದ್ದೀರಿ. (ನನ್ನ ಮೋಹವನ್ನೂ ದೂರಮಾಡಿ ಎಂದು) ಭಾವವು.

ಶ್ರೀ ಜ್ವಾಲಿನೀನುತಪದಾಬ್ಜ! ಜಿನೇಂದ್ರ ಚಂದ್ರ! ।
ಜ್ವಾಲಾಕಲಾಪ ಕೃತಭಸ್ಮಮಯಂಹಿ ಕರ್ಮ ॥
ಶ್ಯಾಮೇಂದ್ರ ಯಕ್ಷವಿನುತಾಂಘ್ರಿಪದಂ ಪ್ರಣೌಮಿ ।
ಕರ್ಮೇಂಧನಾನಿ ಮಮ ಪ್ರಜ್ವಲತಾನ್ಮುನೀಂದ್ರ ॥ ೭ ॥

**ಭಾವ:** ಶ್ರೀ ಜ್ವಾಲಾಮಾಲಿನೀ ದೇವಿಯಿಂದ ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳ ಜಿನೇಂದ್ರಚಂದ್ರನೇ! ಜ್ವಾಲಾಮಾಲಿನೀ ದೇವಿಯ ಉಗ್ರವಾದ ಜ್ವಾಲೆಗಳ ಸಮೂಹದಿಂದ ಪಾಪವು ಭಸ್ಮಗೊಳಿಸಲ್ಪಟ್ಟಿತು. ಶ್ಯಾಮೇಂದ್ರ ಯಕ್ಷೇಶ್ವರನಿಂದ ವಂದಿಸಲ್ಪಟ್ಟ ಪಾದಪದ್ಮಗಳುಳ್ಳ ಮುನೀಂದ್ರನಾದ ಚಂದ್ರನಾಥೇಶ್ವರನೇ! ಜ್ವಾಲಿನಿಯ ಪ್ರಸಾದದಿಂದ ನನ್ನ ಕರ್ಮಗಳೆಂಬ ಕಟ್ಟಿಗೆಗಳು ಸುಟ್ಟುಹೋಗಲಿ!

ಜ್ಞಾನಪ್ರದಂ ವಿಬುಧವಂದ್ಯಪದಂ ಯತೀಶಮ್ ।
ಭೀತಿಪ್ರಪನ್ನಜನದುಃಖನಿವಾರಣೋದ್ಧಮ್ ॥
ಪ್ರಾಪ್ತೋಽಸಿ ಧ್ಯಾನನಿರತೋ ವರಮೋಕ್ಷಲಕ್ಷ್ಮೀಮ್ ।
ಮುಕ್ತಿಪ್ರದಂ ತಮಿಹ ನೌಮಿ ಚ ಬಾಲಪಾಲಃ (ಶಿಶುಪಾಲ) ॥ ೮ ॥

**ಭಾವ:** ಲೋಕದಲ್ಲಿ ಪ್ರಖ್ಯಾತಿ (ತೀರ್ಥಂಕರತ್ವವೆಂಬ) ಯನ್ನು ನೀಡುವ ಭಯಗ್ರಸ್ತ ಜನರ ಕಷ್ಟಗಳನ್ನು ನಿವಾರಿಸುವಲ್ಲಿ ತತ್ಪರರಾದ ಪರಮಶುಕ್ಲಧ್ಯಾನದಲ್ಲಿ ನಿರತರಾಗಿ (ನಿಶ್ಚಲರಾಗಿ) ಮುಕ್ತಿ ಲಕ್ಷ್ಮಿಯನ್ನು ಪಡೆದ ಮುಕ್ತಿಯನ್ನೇ ನೀಡಬಲ್ಲ ಶ್ರೀಚಂದ್ರಪ್ರಭನಾಥ ಸ್ವಾಮಿಯೇ ಬಾಲಪಾಲ (ಶಿಶುಪಾಲ)ನಾದ ನಾನು ನಿಮ್ಮನ್ನು ವಂದಿಸುತ್ತೇನೆ.

—: ಓಂ :—

# ಶ್ರೀ ಜ್ವಾಲಾಮಾಲಿನೀ — ಸ್ತೋತ್ರಮ್

(ಅನುಷ್ಟುಭ್ ಛಂದಸ್ಸಿನಲ್ಲಿ ಅರ್ಥಪೂರ್ತಿಗಾಗಿ ಶ್ಲೋಕ ಯುಗ್ಮಕ (ಎರಡೆರಡು ಶ್ಲೋಕಗಳ ಜೋಡಿ)ವಾಗಿ ಈ ಸ್ತೋತ್ರ ರಚಿಸಲಾಗಿದೆ)

**ಶ್ಲೋಕಯುಗ್ಮಕ :—**

ಚಂದ್ರನಾಥ ಜಿನೇಂದ್ರಸ್ಯ ಭೃಂಗೀ ಶ್ರೀಪಾದಪದ್ಮಯೋಃ ।
ಶ್ಯಾಮಯಕ್ಷಪ್ರಿಯೇ! ಶುಭ್ರೇ! ಶುಭ್ರವಸ್ತ್ರಸಮನ್ವಿತೇ! ॥ ೧ ॥
ಜ್ವಾಲಾಮಾಲಾಕಲಾಪೈಸ್ತು ಪಾಪ ವಿಧ್ವಂಸಕಾರಿಣಿ! ।
ಬಾಲಪಾಲಃ ಸ್ಮರಾಮಿ ತ್ವಾಂ ಜ್ವಾಲೇ! ಮಾಂ ಪಾಹಿ ಸರ್ವದಾ ॥ ೨ ॥

**ಭಾವಾರ್ಥ :—**

ಶ್ರೀ ಚಂದ್ರನಾಥ ಸ್ವಾಮಿಯ ಪಾದಕಮಲಗಳ ದುಂಬಿಯಾಗಿರುವ, ಶ್ಯಾಮಯಕ್ಷನ ಪ್ರಿಯೆಯಾದ, ಗೌರ (ಬಿಳಿ) ವರ್ಣದ, ಬಿಳಿಯ ಬಟ್ಟೆಯನ್ನು ತೊಟ್ಟಿರುವ, ತನ್ನ ಕ್ರೋಧಾಗ್ನಿಯ ಜ್ವಾಲೆಗಳಿಂದ ಪಾಪಗಳನ್ನು ಭಸ್ಮಗೊಳಿಸಬಲ್ಲ, ಸುಖಕಾರಿಣಿಯಾದ, ಶ್ರೀ ಜ್ವಾಲಿನೀಮಾತೆಯೇ "ಬಾಲಪಾಲ" (ಶಿಶುಪಾಲ)ನೆಂಬ ಕಾವ್ಯನಾಮ ಹೊಂದಿರುವ ನನ್ನನ್ನು ಯಾವಾಗಲೂ ಕಾಪಾಡು!

**ಶ್ಲೋಕಯುಗ್ಮಕ :—**

ಪೂರ್ವಜನ್ಮನಿ ತೀರ್ಥೇಶಂ ಪದ್ಮೈರಷ್ಟಸಹಸ್ರಕೈಃ ।
ಪೂಜಯಿತ್ವಾ ಮಹದ್ಭಕ್ತ್ಯಾ ಸತೀ "ಕನಕಮಂಜರೀ" ॥ ೩ ॥
ಸ್ವಾನುರೂಪಂ ಪತಿಂ ಪ್ರಾಪ್ತಾ ಭೂಪತಿಂ ಪುಂಡರೀಕಕಮ್ ।
"ಬಾಲಪಾಲಃ" ಸ್ಮರಾಮಿ ತ್ವಾಂ ಜ್ವಾಲೇ ಮಾಂ ಪಾಹಿ ಸರ್ವದಾ ॥ ೪ ॥

# ಬಾಹುಬಲಿ — ಪಂಚಕಮ್ ॥

ಶ್ರೀನಾಭೇಯ ಜಿನೇಂದ್ರಚಂದ್ರ ಸುಖದೋ ದೇವೀಸುನಂದಾಸುತಃ ।
ಜೇತಾ ಶ್ರೀಭರತಾಗ್ರಜಸ್ಯ ಸಮರೇ, ನೇತಾ ವಿಮುಕ್ತೇಃ ಪಥಃ ॥
ಭೋಕ್ತಾನಂತ ಸುಖಸ್ಯ ಲೋಕಮಹಿತಸ್ತ್ರಾತಾ ಜಗತ್ಪ್ರಾಣಿನಾಮ್ ।
"ಶ್ರೀಮದ್ಬೆಳ್ಗೊಳ" ವಿಂಧ್ಯಶೈಲಶಿಖರೇ ಜೀಯಾಚ್ಚಿರಂ
ಗೊಮ್ಮಟಃ ॥ ೧ ॥

ಶ್ರೀ ನಾಭಿರಾಜನ ವಂಶದಲ್ಲಿ ಜನಿಸಿದ ಆದಿನಾಥ ಜಿನೇಂದ್ರ ಮತ್ತು ಸುನಂದಾದೇವಿಯರ ಸತ್ಪುತ್ರನಾದ, ಅಣ್ಣನಾದ ಭರತ ಚಕ್ರಿಯನ್ನು ಯುದ್ಧದಲ್ಲಿ ಗೆದ್ದ ಮುಕ್ತಿಯ ಮಾರ್ಗದರ್ಶಕನಾದ ಮತ್ತು ಅನಂತಸುಖವನ್ನು ಭೋಗಿಸುವವನೂ, ಲೋಕಪೂಜ್ಯನೂ, ಜಗತ್ತಿನ ಪ್ರಾಣಿಗಳ ರಕ್ಷಕನೂ, ಆಗಿರುವ ಬೆಳ್ಗೊಳ ಮಹಾಕ್ಷೇತ್ರದ ವಿಂಧ್ಯ ಪರ್ವತಾಗ್ರದಲ್ಲಿ ನೆಲೆಸಿರುವ ಶ್ರೀ ಗೊಮ್ಮಟಜಿನನು ಚಿರಕಾಲ ಜಯಶಾಲಿಯಾಗಿರಲಿ.

ಜಿತ್ವಾ ಬಾಹುಬಲೇನ ವಿಭವಂ ಮೇನೇ ತೃಣಂ ಚಂಚಲಮ್ ।
ನಿರ್ವೇದಂ ಪ್ರತಿಪದ್ಯ ರಾಜ್ಯವನಿತಾಂ ತ್ಯಕ್ತ್ವಾ ವ್ರಜತ್ಕಾನನಮ್ ॥
ದೃಷ್ಟ್ವಾ ಶ್ರೀ ಭರತಾಗ್ರಜಂ ಪದನತಂ ನಿಶ್ಶಲ್ಯತಾಂ ಸಂಗತಃ ।
"ಶ್ರೀಮದ್ಬೆಳ್ಗೊಳ" ವಿಂಧ್ಯಶೈಲಶಿಖರೇ ಜೀಯಾಚ್ಚಿರಂ
ಗೊಮ್ಮಟಃ ॥ ೨ ॥

ತನ್ನ ಬಾಹುಬಲದಿಂದ ಅಣ್ಣ ಭರತನನ್ನು ಗೆದ್ದರೂ, ಐಶ್ವರ್ಯ ಸ್ಥಿರವಲ್ಲವೆಂದು ವಿರಕ್ತಿತಾಳಿ ಅಪಾರವಾದ ರಾಜ್ಯಲಕ್ಷ್ಮಿಯನ್ನು ತ್ಯಜಿಸಿ ಕಾಡಿಗೆ ಹೋದನು. ಯುದ್ಧದಲ್ಲಿ ಸೋತ ಅಣ್ಣನಾದ ಭರತ ಚಕ್ರ

ವರ್ಗಿಯು ತನ್ನ ಪಾದಕ್ಕೆರಗಿದಾಗ ಸಂಜ್ವಲನ ಮಾನಕಷಾಯ (ಅಹಂಕಾರ) ವು ಕ್ಷಯವಾಗಿ ಕೇವಲ ಜ್ಞಾನವನ್ನು ಹೊಂದಿದ ಬೆಳ್ಗೊಳ ಮಹಾಕ್ಷೇತ್ರದ ವಿಂಧ್ಯಪರ್ವತಾಗ್ರದಲ್ಲಿ ನೆಲೆಸಿರುವ – ಶ್ರೀ ಗೊಮ್ಮಟಜಿನನು ಚಿರಕಾಲ ಜಯಶಾಲಿಯಾಗಿರಲಿ!

ಮಾಂ ಮಾ ಮುಂಚ ಮನೋಹರೇತಿ ಲತಿಕಾವ್ಯಾಜೇನ<br>ಬಾಹುದ್ವಯಮ್ ।<br>ಪ್ರೇಮ್ಣಾಬಧ್ಯ ಚ ಭೂಮಿ-ಮುಕ್ತಿ-ವನಿತೇ ಗಾಢಂ ಸಮಾಕರ್ಷತಃ ॥<br>ಪ್ರದ್ಯುಮ್ನಃ ಪ್ರಥಮಃ ಪಿತುಃ ಪುನರಯಂ ಪ್ರಾಗೇವ ಮುಕ್ತಿಂ ಗತಃ ।<br>"ಶ್ರೀಮದ್ಬೆಳ್ಗೊಳ" ವಿಂಧ್ಯಶೈಲಶಿಖರೇ ಜೀಯಾಚ್ಚಿರಂ<br>ಗೊಮ್ಮಟಃ ॥ ೩ ॥

ಮಾಧವೀಲತೆಗಳ ರೂಪದಲ್ಲಿ ಭೂಲಕ್ಷ್ಮಿ ಮತ್ತು ಮುಕ್ತಿ ಲಕ್ಷ್ಮಿಯರು ಶ್ರೀಸ್ವಾಮಿಯ ಎರಡು ತೋಳುಗಳನ್ನು ಬಳಸಿ ತಮ್ಮೆಡೆಗೆ ಸೆಳೆಯುತ್ತಿರುವರೋ ಎಂಬಂತಿರುವ ಪ್ರಥಮ ಮನ್ಮಥನಾಗಿ, ತಂದೆಯಾದ ಶ್ರೀ ಆದಿಜಿನೇಂದ್ರರಿಗಿಂತಲೂ ಮೊದಲೇ ಮೋಕ್ಷವನ್ನು ಹೊಂದಿದ ಶ್ರೀ ಬೆಳ್ಗೊಳ ಮಹಾಕ್ಷೇತ್ರದ ವಿಂಧ್ಯಪರ್ವತದ ತುದಿಯಲ್ಲಿ ಕಂಗೊಳಿಸುವ ಗೊಮ್ಮಟಜಿನನು ಚಿರಕಾಲ ಜಯಶಾಲಿಯಾಗಿರಲಿ!

ಕರ್ಮಾರಿಃ ಕಮನೀಯಕಂಧರಧರಃ ಕಂದರ್ಪದರ್ಪಾಂತಕಃ ।<br>ಕಾಮಃ ಕಾಮಿತದಾಯಕಃ ಕರಿಕರೇವಾಲಂಬಬಾಹುದ್ವಯಃ ॥<br>ಕಂಜಾಕ್ಷಃ ಸುಕಲಾಧರೇಭಸುಮುಖಃ ಕಲ್ಯಾಣಕೀರ್ತಿಪ್ರದಃ ।<br>"ಶ್ರೀಮದ್ಬೆಳ್ಗೊಳ" ವಿಂಧ್ಯಶೈಲಶಿಖರೇ ಜೀಯಾಚ್ಚಿರಂ<br>ಗೊಮ್ಮಟಃ ॥ ೪ ॥

ಕರ್ಮಶತ್ರುಗಳನ್ನು ಗೆದ್ದ ಸುಂದರವಾದ ಕಂಠವನ್ನು ಧರಿಸಿರುವ ಮನ್ಮಥನಂತೆ ಸುಂದರ ಸ್ವರೂಪಿಯೂ, ಇಷ್ಟಾರ್ಥಗಳನ್ನು ಕೊಡು

ವವನೂ, ಆನೆಯ ಸೊಂಡಿಲಿನಂತಿರುವ ನೀಳವಾದ ತೋಳುಗಳನ್ನು ಹೊಂದಿರುವವನೂ, ಕಮಲದಂತೆ ಕಣ್ಣುಗಳುಳ್ಳವನೂ, ಚಂದಿರನಂತಿರುವ ಸುಂದರ ಮುಖವುಳ್ಳವನೂ, ಕಲ್ಯಾಣಕರವಾದ ಸತ್ಕೀರ್ತಿಯನ್ನು ಕೊಡುವವನೂ ಆದ ಶ್ರೀ ಬೆಳ್ಗೊಳ ಮಹಾಕ್ಷೇತ್ರದ ವಿಂಧ್ಯ ಪರ್ವತದ ಅಗ್ರಭಾಗ (ತುದಿ) ದಲ್ಲಿ ಕಂಗೊಳಿಸುವ ಗೊಮ್ಮಟಜಿನನು ಚಿರಕಾಲ ಜಯಶಾಲಿಯಾಗಿರಲಿ !

ದೇವೇಂದ್ರಾದಿ-ನುತೋ ದಿವಾಕರರುಚಿರ್ವಿದ್ಯಾಧರಃ ಶ್ರೀಧರಃ ।
ಯೋಗೀಂದ್ರಾದಿ-ನುತೋ ಮಹೋನ್ನತತನುಃ
ಶ್ರೀಚಾರುಕೀರ್ತ್ಯರ್ಚಿತಃ ॥

ಸದ್ಭಕ್ತ್ಯಾ ಶಿಶುಪಾಲಸನ್ನುತಪದಃ ಕರ್ಮಾಪಹೋ ನಿರ್ಮಲಃ ।
"ಶ್ರೀಮದ್ಬೆಳ್ಗೊಳ" ವಿಂಧ್ಯಶೈಲಶಿಖರೇ ಜೀಯಾಚ್ಚಿರಂ
ಗೊಮ್ಮಟಃ ॥ ೫ ॥

ದೇವೇಂದ್ರಾದಿಗಳಿಂದ ನಮಸ್ಕರಿಸಲ್ಪಟ್ಟ, ಸೂರ್ಯನಂತೆ, ಜ್ಞಾನತೇಜಸ್ಸಿನಿಂದ ಪ್ರಕಾಶಿಸುವ, ಕೇವಲ ಜ್ಞಾನಧಾರಿಯಾದ, ಮೋಕ್ಷ ಲಕ್ಷ್ಮಿಗೊಡೆಯನಾದ ಯೋಗಿರಾಜಾದಿಗಳಿಂದ ಸ್ತೋತ್ರ ಮಾಡಲ್ಪಟ್ಟ, ಸುಖವನ್ನೀಯುವ ಶ್ರೀ ಚಾರುಕೀರ್ತಿಯವರಿಂದ ಪೂಜಿಸಲ್ಪಡುವ ಭಕ್ತಿಯಿಂದ ಶಿಶುಪಾಲನಿಂದ ನಮಸ್ಕರಿಸಲ್ಪಟ್ಟ ಚರಣಕಮಲವುಳ್ಳ, ಕರ್ಮಶತ್ರುಗಳನ್ನು ಗೆದ್ದು ಕರ್ಮಮಲರಹಿತನಾಗಿ ನಿರ್ಮಲನಾಗಿರುವ ಶ್ರೀ ಬೆಳ್ಗೊಳ ಮಹಾಕ್ಷೇತ್ರದ ವಿಂಧ್ಯಗಿರಿ ಶಿಖರಾಗ್ರದಲ್ಲಿ ನೆಲೆಸಿರುವ ಶ್ರೀ ಗೊಮ್ಮಟೇಶ್ವರನು ಸದಾಕಾಲ ಜಯಶಾಲಿಯಾಗಿರಲಿ !

